

# ಕೇನೋಪನಿಷತ್



ಅನುವಾದ ಮತ್ತು ವಿವರಣೆ

ಎ. ಶ್ರೀನಿವಾಸ ರಂಗನ್



ಶ್ರೀಃ

## ಆಶೀರ್ವಾದ

ನಮ್ಮ ಜ್ಯೇಷ್ಠಪುತ್ರ ಚಿ|| ಶ್ರೀನಿವಾಸರಂಗನ್ ಉಪನಿಷತ್ ಅಧ್ಯಯನವನ್ನು ಮುಂದುವರಿಸುತ್ತಿರುವುದು ನನಗೆ ಸಂತೋಷ ವನ್ನುಂಟುಮಾಡಿದೆ. ಮೊದಲು ಮುಂಡಕೋಪನಿಷತ್, ನಂತರ ಈಶಾವಾಸ್ಯ ಈಗ ಕೇನೋಪನಿಷತ್ - ಇವುಗಳ ಅನ್ವಯ, ಅರ್ಥ ನಿರೂಪಣೆ ಇವುಗಳನ್ನು ಬರೆದು ಉಪನಿಷತ್ತಿನ ಅಧ್ಯಯನ ಮಾಡುವವರಿಗೆ ಉಪಕಾರ ಮಾಡಿದ್ದಾನೆ. ಅವನಿಗೆ ನನ್ನ ಶುಭಾಶೀರ್ವಾದಗಳು. ಹೀಗೆಯೇ ಇತರ ಉಪನಿಷತ್ತುಗಳನ್ನು ಕ್ರಮಕ್ರಮವಾಗಿ ಅಧ್ಯಯನ ಮಾಡಿ ಬರೆಯಲೆಂದು ಆಶಿಸುತ್ತೇನೆ.

ಕೇನೋಪನಿಷತ್ತು ಉಪಾಸನೆಯನ್ನು ಮೊಟ್ಟ ಮೊದಲು ಪ್ರತಿಪಾದಿಸುತ್ತದೆ ಜ್ಞಾನದ ವ್ಯಾಪ್ತಿಯನ್ನು ತಿಳಿಸುತ್ತಾ ಯಾರೂ ಎಲ್ಲವನ್ನು ತಿಳಿದು ತಿಳಿದೆನೆಂದು ಹೇಳುವಂತಿಲ್ಲ ಎಂದು ತಿಳಿಸುತ್ತದೆ. "ತಿಳಿದೆನು" ಎನ್ನುವನು ತಿಳಿದಿಲ್ಲ. "ನನಗೆ ತಿಳಿದಿಲ್ಲ" ಎನ್ನುವನು ತಿಳಿದಿದ್ದಾನೆ. ಅತ್ಯಂತ ಅಜ್ಞಾನವೂ ಅಲ್ಲ, ಅತ್ಯಂತ ಜ್ಞಾನವು ಅಲ್ಲ. "ತಿಳಿದಿದ್ದೇನೆ" - "ತಿಳಿದಿಲ್ಲ" ಎಂದು ಆಶ್ಚರ್ಯಕರವಾಗಿ ಜ್ಞಾನಸ್ವರೂಪವನ್ನು ನಿರೂಪಿಸುತ್ತದೆ. "नो न वेदेति वेद च" ಎಂಬುದು ಇವರ ಸಿದ್ಧಾಂತ. (ಪೂರ್ಣವಾಗಿ ತಿಳಿದಿಲ್ಲ. ತಿಳಿಯದ ಅಂಶ ಉಂಟು)

ಒಂದು ಆಖ್ಯಾಯಿಕೆಯನ್ನು ಹೇಳಿ, ಪಾರ್ವತಿ ದೇವಿಯಿಂದ ಇಂದ್ರನಿಗೆ ಬ್ರಹ್ಮೋಪದೇಶವನ್ನು ಪ್ರಸ್ತಾಪಿಸುತ್ತದೆ. ಇಂದ್ರ, ಅನಿಲ, ಅನಲ ಇವರುಗಳು ತಿಳಿಯಲಾರದೇ ಹೋದರು ರತ್ನವನ್ನು (ಪರಬ್ರಹ್ಮನನ್ನು). ಬ್ರಹ್ಮನೇ ಯಕ್ಷನ ರೂಪದಲ್ಲಿ ಕಾಣಿಸಿಕೊಂಡನು. ಆದರೆ ''ತಾನು ಯಾರು?'' ಎಂದು ಹೇಳಿಕೊಳ್ಳಲಿಲ್ಲ. ಬ್ರಹ್ಮೋಪದೇಶ ಗುರುಮುಖೇನ ಆಗಬೇಕು. ಆದ್ದರಿಂದ

ದಯಾ ಮಯಿಯಾದ ಪಾರ್ವತಿ ದೇವಿಯು ತೋರಿಕೊಂಡು ಇಂದ್ರನಿಗೆ "ಆ ಯಕ್ಷವು ಬ್ರಹ್ಮ, ಬ್ರಹ್ಮೋಪಾಸನೆ ಮಾಡಿ, ಎಲ್ಲವೂ ಬ್ರಹ್ಮದ ವಿಜಯ, ಅಹಂಕಾರವನ್ನು ಬಿಡಿ" ಎಂದು ಹೇಳುತ್ತಾಳೆ. ಬ್ರಹ್ಮ ಸ್ವರೂಪವು ಗುರುವಿನ ಉಪದೇಶದಿಂದಲೇ ತಿಳಿಯತಕ್ಕದ್ದು.

तत् वनम् इत्युपसितव्यम् ಎಂದು ಕೊನೆಯಲ್ಲಿ ಉಪಾಸನೆಯ ಮಾರ್ಗವನ್ನು ತಿಳಿಸಿದೆ. ಬ್ರಹ್ಮಸ್ವರೂಪ, ಬ್ರಹ್ಮೋಪಾಸನೆ ಇವುಗಳನ್ನು ನೇರವಾಗಿ ಸಂಕ್ಷಿಪ್ತವಾಗಿ ಉಪದೇಶಿಸಿದೆ. ಈ ಉಪನಿಷತ್ತಿನ ಅಧ್ಯಯನದಿಂದ ಎಲ್ಲರಿಗೂ ಪ್ರಯೋಜನ ಆಗಲೆಂದು ಆಶಿಸುತ್ತೇನೆ.

ಚಿ|| ಶ್ರೀನಿವಾಸರಂಗನ್ ಇನ್ನೂ ಇತರ ಉಪನಿಷತ್ತುಗಳ ಅಧ್ಯಯನವನ್ನು ಮುಂದುವರಿಸಿ ಕಿರು ಹೊತ್ತಿಗೆಗಳನ್ನು ಪ್ರಕಾಶಪಡಿಸಲಿ ಎಂದು ಹಾರೈಸುತ್ತೇನೆ.

ಬೆಂಗಳೂರು
23-2-2011

ಇಂತು ಸಜ್ಜನ ವಿಧೇಯ
ಎನ್.ಎಸ್. ಅನಂತರಂಗಾಚಾರ್

# ಮುನ್ನುಡಿ

ಶ್ರೀನಿವಾಸ ಯತಿಶ್ರೇಷ್ಠ ದಯಾಪಾತ್ರೋಗುಣಾನ್ವಿತಃ |
ಕೌಶಿಕ ಅನಂತರಂಗಾರ್ಯೋಃ ಚಿರಂ ವಿಜಯಿತಾಂ ಭುವಿ ||
ಶ್ರೀಮತೇ ಗೋಪಾಲದೇಶಿಕ ಮಹಾದೇಶಿಕಾಯ ನಮಃ
ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯ ನಮಃ
ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ
ಶ್ರೀಮತೇ ಭಗವತೇ ಭಾಷ್ಯಕಾರಯ ಮಹಾದೇಶಿಕಾಯ ನಮಃ
ಶ್ರೀಮಹಾಲಕ್ಷ್ಮಿ ಸಮೇತ ಗುಂಜಾನರಸಿಂಹ ಸ್ವಾಮಿನೇ ನಮಃ ||

ಕೇನೋಪನಿಷತ್ ಉಪನಿಷತ್‌ಗಳಲ್ಲಿ ಬಹಳ ಮುಖ್ಯದಾಗಿದೆ. "ಕೇನ" ಎಂದು ಮೊದಲನೆಯ ಮಂತ್ರದ ಮೊದಲನೆಯ ಪದವು ಆರಂಭವಾಗುವುದರಿಂದ ಈ ಉಪನಿಷತ್ತು "ಕೇನೋಪನಿಷತ್" ಎಂದು ಕರೆಯಲ್ಪಟ್ಟಿದೆ. ಇದನ್ನು "ತಲವಕಾರ ಉಪನಿಷತ್ತು" ಎಂದೂ ಹೇಳುವರು. ಎಲ್ಲಾ ಉಪನಿಷತ್ತುಗಳಲ್ಲಿ ಪ್ರತಿಪಾದಿಸಿರುವಂತೆ ಬ್ರಹ್ಮಸ್ವರೂಪವನ್ನು ಸ್ಪಷ್ಟವಾಗಿ ತಿಳಿಸಿ, ನಂತರ ಬ್ರಹ್ಮಪ್ರಾಪ್ತಿಯ ಉಪಾಯವನ್ನು ಹಾಗೂ ಅದರ ಫಲವನ್ನು ತಿಳಿಸುತ್ತದೆ. ಉಪಾಸನೆಯಿಂದಲೇ ಬ್ರಹ್ಮಪ್ರಾಪ್ತಿ ಎಂದು ಹೇಳಿ ಭಕ್ತಿಯೋಗವನ್ನು ಇಲ್ಲಿ ಹೇಳಲಾಗಿದೆ.

ಈ ಉಪನಿಷತ್ತಿನಲ್ಲಿ ನಾಲ್ಕು ಖಂಡಗಳಿವೆ.

ಮೊದಲನೆಯ ಖಂಡದಲ್ಲಿ "ಜ್ಞಾನ ಪ್ರಾಪ್ತಿಗೆ ಸಾಧನವಾದ ಇಂದ್ರಿಯ ಗಳಿಗೆ ಪ್ರೇರಕನಾರು?" ಎಂಬ ಪ್ರಶ್ನೆಗೆ ಆಚಾರ್ಯರು श्रोत्रस्य श्रोत्रं मनसो मनः वाचो वाचः, प्राणस्य प्राणः, चक्षुषा चक्षुः ಎಂದು ಹೇಳಿ ಆ ಪರಬ್ರಹ್ಮನೇ ಎಲ್ಲಾ ಇಂದ್ರಿಯಗಳಿಗೂ ಪ್ರೇರಕನು ಎನ್ನುತ್ತಾರೆ. ಅವನ ಪ್ರೇರಣೆಯಿಂದಲೇ ಇಂದ್ರಿಯಗಳು ವ್ಯಾಪಾರ ಮಾಡುತ್ತವೆ. ಈ ತತ್ತ್ವವನ್ನು

ಅರಿತ ಜ್ಞಾನಿಗಳು ತಮ್ಮ ಶರೀರವನ್ನು ತ್ಯಜಿಸಿದ ನಂತರ अमृता भवन्ति ಎಂಬಂತೆ ಮುಕ್ತರಾಗುತ್ತಾರೆ.

ಮುಂದೆ ಆಚಾರ್ಯರು ಬ್ರಹ್ಮಸ್ವರೂಪವನ್ನು ನಿರೂಪಣೆ ಮಾಡುತ್ತಾ "ಬ್ರಹ್ಮವು ನಮಗೆ ತಿಳಿದಿರುವ ಹಾಗೂ ತಿಳಿಯದೇ ಇರುವ ಎಲ್ಲಾ ಲೌಕಿಕ ಬಾಹ್ಯ ವಸ್ತುಗಳಿಗಿಂತಲೂ, ಜ್ಞಾನಕ್ಕೆ ಗೋಚರವಾದ ಹಾಗೂ ಅಗೋಚರವಾದ ಎಲ್ಲಾ ವಸ್ತುವಿಗಿಂತಲೂ ವಿಲಕ್ಷಣವಾಗಿದೆ ಮತ್ತು ಇಂದ್ರಿಯಗಳಿಗೆ ಅಗೋಚರವಾದ ಬ್ರಹ್ಮಸ್ವರೂಪವನ್ನು ನಿರ್ದಿಷ್ಟವಾಗಿ ಹೇಳಲು ಅಸಾಧ್ಯ ಎನ್ನುತ್ತಾರೆ".

ಎರಡನೇ ಖಂಡದಲ್ಲಿ ಬ್ರಹ್ಮ ಸ್ವರೂಪವನ್ನು ಮುಂದೆ ವಿವರಿಸಿ, ಬ್ರಹ್ಮ ಪ್ರಾಪ್ತಿಯ ಮಾರ್ಗವನ್ನು ಉಪದೇಶಿಸುತ್ತಾರೆ. ಶಿಷ್ಯನಿಗೆ ಆಚಾರ್ಯರು ಬ್ರಹ್ಮಸ್ವರೂಪವನ್ನು ಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲ ಎಂದು अविज्ञातं विजानतां विज्ञातं अविजानताम् ದೃಢೀಕರಿಸುತ್ತಾರೆ.

ನಿರಂತರ ಉಪಾಸನೆ ಹಾಗೂ ಸದಾಕಾಲ ಬ್ರಹ್ಮ ಚಿಂತನೆಯಿಂದ ಬ್ರಹ್ಮ ಪ್ರಾಪ್ತಿ ಖಂಡಿತ ಎಂದು ಆದೇಶ ನೀಡುತ್ತಾರೆ. ಇದನ್ನು विद्याया अमृतत्वं विन्दते ಎಂದು ಹೇಳಿದೆ. ಅಂತಹ ಜ್ಞಾನಿಗೆ ಬ್ರಹ್ಮಪ್ರಾಪ್ತಿಯ ಸಾಮರ್ಥ್ಯವನ್ನು ಆ ಪರಮಾತ್ಮನೇ ಅನುಗ್ರಹಿಸುತ್ತಾನೆ ಎಂಬುದನ್ನು आत्मना वीर्यं विन्दते ಎಂದಿದ್ದಾರೆ. ಬ್ರಹ್ಮ ಸಾಕ್ಷಾತ್ಕಾರ ಫಲದಿಂದ ಬ್ರಹ್ಮಜ್ಞಾನಿಗೆ ಈ ಜನ್ಮದ ನಂತರ ಮೋಕ್ಷ ಪ್ರಾಪ್ತವಾಗುತ್ತದೆ. ಇದನ್ನು ಅರಿಯದೇ ಹೋದರೆ महति विनष्टिः ಎಂದು ಹೇಳಿ ಬಹಳ ಘೋರನಷ್ಟವಾಗಿ ಆತ್ಮನಾಶ ಉಂಟಾಗುತ್ತದೆ ಎಂದು ಎಚ್ಚರಿಕೆಯನ್ನು ನೀಡುತ್ತಾರೆ.

ಮೂರನೇ ಖಂಡದಲ್ಲಿ ಒಂದು ಕಥಾ ವೃತ್ತಾಂತವನ್ನು ಹೇಳಿ ಪರಮಾತ್ಮನು ದೇವತೆಗಳಿಗೂ ಅಂತರ್ಯಾಮಿಯಾಗಿ ನಿಯಂತ್ರಿಸುತ್ತಾನೆ ಎಂಬ ಅಂಶವನ್ನು ಹೇಳುತ್ತಾರೆ.

ಅಸುರರ ಮೇಲೆ ಜಯ ಗಳಿಸಿ ಅಹಂಕಾರಕ್ಕೆ ಒಳಗಾದ ದೇವತೆಗಳನ್ನು ಉದ್ಧರಿಸುವ ದೃಷ್ಟಿಯಿಂದ ಪರಮಾತ್ಮನು ಯಕ್ಷರೂಪಿಯಾಗಿ ಬರುತ್ತಾನೆ ಆದರೆ ಅಗ್ನಿ, ವಾಯು ಇಂದ್ರರಿಗೆ ಆ ಯಕ್ಷನು ಯಾರೆಂದು ತಿಳಿಯಲಾಗಲಿಲ್ಲ. ಇಂದ್ರನು ಬಂದ ಒಡನೆಯೇ ಆ ಯಕ್ಷನು ಕಣ್ಮರೆಯಾಗುತ್ತಾನೆ. ಆ ಯಕ್ಷನಿದ್ದ ಸ್ಥಳದಲ್ಲೇ ಪಾರ್ವತಿ ದೇವಿಯು ಇಂದ್ರನಿಗೆ ಪ್ರತ್ಯಕ್ಷಳಾಗಿ, ಆಚಾರ್ಯರ ಸ್ಥಾನದಲ್ಲಿದ್ದು ಭಗವತ್‌ಸ್ವರೂಪವನ್ನು ಇಂದ್ರನಿಗೆ ಉಪದೇಶಿಸುತ್ತಾಳೆ.

ನಾಲ್ಕನೇ ಖಂಡದಲ್ಲಿ ಪಾರ್ವತಿ ದೇವಿಯು ದೇವತೆಗಳಿಗೆ ಜಯವನ್ನು ಸಂಪಾದಿಸಿಕೊಟ್ಟದ್ದು ಪರಮಾತ್ಮನೇ ಎಂದು ಹೇಳುತ್ತಾಳೆ. ಪರಮಾತ್ಮನ ಸಾಕ್ಷಾತ್ಕಾರವಾದುದರಿಂದ ಅಗ್ನಿ, ವಾಯು, ಇಂದ್ರರು ಮಿಕ್ಕ ದೇವತೆಗಳಿಗಿಂತಲೂ ಶ್ರೇಷ್ಠರಾಗುತ್ತಾರೆ. ಕೊನೆಯಲ್ಲಿ "ಬ್ರಹ್ಮದ ಆವಿರ್ಭಾವವು ಕ್ಷಣಿಕ (ಮಿಂಚಿನಂತೆ) ಇದನ್ನು ವನಮ್ ಎಂದು ಉಪಾಸನೆ ಮಾಡಬೇಕು. ಈ ಬ್ರಹ್ಮವಿದ್ಯೆಯ ಸಿದ್ಧಿಗೆ ತಪಸ್ಸು, ಇಂದ್ರಿಯ ನಿಗ್ರಹ, ಕರ್ಮಾನುಷ್ಠಾನ, ನಾಲ್ಕು ವೇದಗಳ ಜ್ಞಾನ ಹಾಗೂ ಸತ್ಯ ನುಡಿಯುವಿಕೆ ಬಹಳ ಅವಶ್ಯಕ" ಎಂದು ಹೇಳುತ್ತಾರೆ.

ಇಂತಹ ಅತ್ಯುತ್ತಮವಾದ ಉಪನಿಷತ್ತನ್ನು ಭಗವತ್ಸಂಕಲ್ಪದಿಂದಲೂ, ಆಚಾರ್ಯರ ಅನುಗ್ರಹದಿಂದಲೂ ಹಾಗೂ ನಮ್ಮ ಶ್ರೀ|| ತಂದೆಯವರ ಆಶೀರ್ವಾದದಿಂದಲೂ ನನಗೆ ನಮ್ಮ ಶ್ರೀ|| ತಂದೆಯವರ ಚರಣ ಸನ್ನಿಧಿಯಲ್ಲಿ ಕಾಲಕ್ಷೇಪ ಮಾಡುವ ಯೋಗ ದೊರಕ್ಕಿದ್ದು ನನ್ನ ಜನ್ಮಜನ್ಮದ ಪುಣ್ಯ. ನಮ್ಮ ಶ್ರೀ|| ತಂದೆಯವರು ತಮ್ಮ ದೇಹದ ಆರೋಗ್ಯದಲ್ಲಿ ವ್ಯತ್ಯಾಸವಿದ್ದರೂ ಲೆಕ್ಕಿಸದೆ ಬಹಳ ಉತ್ಸಾಹದಿಂದ ಈ ಉಪನಿಷತ್ತಿನ ಸೂಕ್ಷ್ಮ ಅರ್ಥಗಳನ್ನು ಹಾಗೂ ಭಾಷ್ಯದ ವಿವರಣೆಗಳನ್ನು ಉಪದೇಶಿಸಿದ್ದಾರೆ. ಅವರಿಗೆ ನಾನು ಚಿರಋಣಿಯಾಗಿದ್ದೇನೆ ಹಾಗೂ ಈ ಪುಸ್ತಕಕ್ಕೆ ಆಶೀರ್ವಚನ ನೀಡಿ ಅನುಗ್ರಹಿಸಿರುವುದಕ್ಕೆ ನನ್ನ ಅನಂತ ಪ್ರಣಾಮಗಳನ್ನು ಸಲ್ಲಿಸುತ್ತೇನೆ. ನಾನು ಗ್ರಹಿಸಿದ್ದನ್ನು ನನ್ನ ಶಕ್ತಿಗನುಸಾರವಾಗಿ ಈ ಪುಸ್ತಕದಲ್ಲಿ ನಿರೂಪಿಸಿದ್ದೇನೆ. ನನ್ನ

ಅರಿತ ಜ್ಞಾನಿಗಳು ತಮ್ಮ ಶರೀರವನ್ನು ತ್ಯಜಿಸಿದ ನಂತರ अमृता भवन्ति ಎಂಬಂತೆ ಮುಕ್ತರಾಗುತ್ತಾರೆ.

ಮುಂದೆ ಆಚಾರ್ಯರು ಬ್ರಹ್ಮಸ್ವರೂಪವನ್ನು ನಿರೂಪಣೆ ಮಾಡುತ್ತಾ "ಬ್ರಹ್ಮವು ನಮಗೆ ತಿಳಿದಿರುವ ಹಾಗೂ ತಿಳಿಯದೇ ಇರುವ ಎಲ್ಲಾ ಲೌಕಿಕ ಬಾಹ್ಯ ವಸ್ತುಗಳಿಗಿಂತಲೂ, ಜ್ಞಾನಕ್ಕೆ ಗೋಚರವಾದ ಹಾಗೂ ಅಗೋಚರವಾದ ಎಲ್ಲಾ ವಸ್ತುವಿಗಿಂತಲೂ ವಿಲಕ್ಷಣವಾಗಿದೆ ಮತ್ತು ಇಂದ್ರಿಯಗಳಿಗೆ ಅಗೋಚರವಾದ ಬ್ರಹ್ಮಸ್ವರೂಪವನ್ನು ನಿರ್ದಿಷ್ಟವಾಗಿ ಹೇಳಲು ಅಸಾಧ್ಯ ಎನ್ನುತ್ತಾರೆ".

ಎರಡನೇ ಖಂಡದಲ್ಲಿ ಬ್ರಹ್ಮ ಸ್ವರೂಪವನ್ನು ಮುಂದೆ ವಿವರಿಸಿ, ಬ್ರಹ್ಮ ಪ್ರಾಪ್ತಿಯ ಮಾರ್ಗವನ್ನು ಉಪದೇಶಿಸುತ್ತಾರೆ. ಶಿಷ್ಯನಿಗೆ ಆಚಾರ್ಯರು ಬ್ರಹ್ಮಸ್ವರೂಪವನ್ನು ಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲ ಎಂದು अविज्ञातं विजानतां विज्ञातं अविजानताम् ದೃಢೀಕರಿಸುತ್ತಾರೆ.

ನಿರಂತರ ಉಪಾಸನೆ ಹಾಗೂ ಸದಾಕಾಲ ಬ್ರಹ್ಮ ಚಿಂತನೆಯಿಂದ ಬ್ರಹ್ಮ ಪ್ರಾಪ್ತಿ ಖಂಡಿತ ಎಂದು ಆದೇಶ ನೀಡುತ್ತಾರೆ. ಇದನ್ನು विद्याया अमृतत्वं विन्दते ಎಂದು ಹೇಳಿದೆ. ಅಂತಹ ಜ್ಞಾನಿಗೆ ಬ್ರಹ್ಮಪ್ರಾಪ್ತಿಯ ಸಾಮರ್ಥ್ಯವನ್ನು ಆ ಪರಮಾತ್ಮನೇ ಅನುಗ್ರಹಿಸುತ್ತಾನೆ ಎಂಬುದನ್ನು आत्मना वीर्यं विन्दते ಎಂದಿದ್ದಾರೆ. ಬ್ರಹ್ಮ ಸಾಕ್ಷಾತ್ಕಾರ ಫಲದಿಂದ ಬ್ರಹ್ಮಜ್ಞಾನಿಗೆ ಈ ಜನ್ಮದ ನಂತರ ಮೋಕ್ಷ ಪ್ರಾಪ್ತವಾಗುತ್ತದೆ. ಇದನ್ನು ಅರಿಯದೇ ಹೋದರೆ महति विनष्टिः ಎಂದು ಹೇಳಿ ಬಹಳ ಘೋರನಷ್ಟವಾಗಿ ಆತ್ಮನಾಶ ಉಂಟಾಗುತ್ತದೆ ಎಂದು ಎಚ್ಚರಿಕೆಯನ್ನು ನೀಡುತ್ತಾರೆ.

ಮೂರನೇ ಖಂಡದಲ್ಲಿ ಒಂದು ಕಥಾ ವೃತ್ತಾಂತವನ್ನು ಹೇಳಿ ಪರಮಾತ್ಮನು ದೇವತೆಗಳಿಗೂ ಅಂತರ್ಯಾಮಿಯಾಗಿ ನಿಯಂತ್ರಿಸುತ್ತಾನೆ ಎಂಬ ಅಂಶವನ್ನು ಹೇಳುತ್ತಾರೆ.

ಅಸುರರ ಮೇಲೆ ಜಯ ಗಳಿಸಿ ಅಹಂಕಾರಕ್ಕೆ ಒಳಗಾದ ದೇವತೆಗಳನ್ನು ಉದ್ಧರಿಸುವ ದೃಷ್ಟಿಯಿಂದ ಪರಮಾತ್ಮನು ಯಕ್ಷರೂಪಿಯಾಗಿ ಬರುತ್ತಾನೆ ಆದರೆ ಅಗ್ನಿ, ವಾಯು ಇಂದ್ರರಿಗೆ ಆ ಯಕ್ಷನು ಯಾರೆಂದು ತಿಳಿಯಲಾಗಲಿಲ್ಲ. ಇಂದ್ರನು ಬಂದ ಒಡನೆಯೇ ಆ ಯಕ್ಷನು ಕಣ್ಮರೆಯಾಗುತ್ತಾನೆ. ಆ ಯಕ್ಷನಿದ್ದ ಸ್ಥಳದಲ್ಲೇ ಪಾರ್ವತಿ ದೇವಿಯು ಇಂದ್ರನಿಗೆ ಪ್ರತ್ಯಕ್ಷಳಾಗಿ, ಆಚಾರ್ಯರ ಸ್ಥಾನದಲ್ಲಿದ್ದು ಭಗವತ್‌ಸ್ವರೂಪವನ್ನು ಇಂದ್ರನಿಗೆ ಉಪದೇಶಿಸುತ್ತಾಳೆ.

ನಾಲ್ಕನೇ ಖಂಡದಲ್ಲಿ ಪಾರ್ವತಿ ದೇವಿಯು ದೇವತೆಗಳಿಗೆ ಜಯವನ್ನು ಸಂಪಾದಿಸಿಕೊಟ್ಟಿದ್ದು ಪರಮಾತ್ಮನೇ ಎಂದು ಹೇಳುತ್ತಾಳೆ. ಪರಮಾತ್ಮನ ಸಾಕ್ಷಾತ್ಕಾರವಾದುದರಿಂದ ಅಗ್ನಿ, ವಾಯು, ಇಂದ್ರರು ಮಿಕ್ಕ ದೇವತೆಗಳಿಗಿಂತಲೂ ಶ್ರೇಷ್ಠರಾಗುತ್ತಾರೆ. ಕೊನೆಯಲ್ಲಿ "ಬ್ರಹ್ಮದ ಆವಿರ್ಭಾವವು ಕ್ಷಣಿಕ (ಮಿಂಚಿನಂತೆ) ಇದನ್ನು ವನಮ್ ಎಂದು ಉಪಾಸನೆ ಮಾಡಬೇಕು. ಈ ಬ್ರಹ್ಮವಿದ್ಯೆಯ ಸಿದ್ಧಿಗೆ ತಪಸ್ಸು, ಇಂದ್ರಿಯ ನಿಗ್ರಹ, ಕರ್ಮಾನುಷ್ಠಾನ, ನಾಲ್ಕು ವೇದಗಳ ಜ್ಞಾನ ಹಾಗೂ ಸತ್ಯ ನುಡಿಯುವಿಕೆ ಬಹಳ ಅವಶ್ಯಕ" ಎಂದು ಹೇಳುತ್ತಾರೆ.

ಇಂತಹ ಅತ್ಯುತ್ತಮವಾದ ಉಪನಿಷತ್ತನ್ನು ಭಗವತ್ಸಂಕಲ್ಪದಿಂದಲೂ, ಆಚಾರ್ಯರ ಅನುಗ್ರಹದಿಂದಲೂ ಹಾಗೂ ನಮ್ಮ ಶ್ರೀ|| ತಂದೆಯವರ ಆಶೀರ್ವಾದದಿಂದಲೂ ನನಗೆ ನಮ್ಮ ಶ್ರೀ|| ತಂದೆಯವರ ಚರಣ ಸನ್ನಿಧಿಯಲ್ಲಿ ಕಾಲಕ್ಷೇಪ ಮಾಡುವ ಯೋಗ ದೊರಕ್ಕಿದ್ದು ನನ್ನ ಜನ್ಮಜನ್ಮದ ಪುಣ್ಯ. ನಮ್ಮ ಶ್ರೀ|| ತಂದೆಯವರು ತಮ್ಮ ದೇಹದ ಆರೋಗ್ಯದಲ್ಲಿ ವ್ಯತ್ಯಾಸವಿದ್ದರೂ ಲೆಕ್ಕಿಸದೆ ಬಹಳ ಉತ್ಸಾಹದಿಂದ ಈ ಉಪನಿಷತ್ತಿನ ಸೂಕ್ಷ್ಮ ಅರ್ಥಗಳನ್ನು ಹಾಗೂ ಭಾಷ್ಯದ ವಿವರಣೆಗಳನ್ನು ಉಪದೇಶಿಸಿದ್ದಾರೆ. ಅವರಿಗೆ ನಾನು ಚಿರಋಣಿಯಾಗಿದ್ದೇನೆ ಹಾಗೂ ಈ ಪುಸ್ತಕಕ್ಕೆ ಆಶೀರ್ವಚನ ನೀಡಿ ಅನುಗ್ರಹಿಸಿರುವುದಕ್ಕೆ ನನ್ನ ಅನಂತ ಪ್ರಣಾಮಗಳನ್ನು ಸಲ್ಲಿಸುತ್ತೇನೆ. ನಾನು ಗ್ರಹಿಸಿದ್ದನ್ನು ನನ್ನ ಶಕ್ತ್ಯಾನುಸಾರವಾಗಿ ಈ ಪುಸ್ತಕದಲ್ಲಿ ನಿರೂಪಿಸಿದ್ದೇನೆ. ನನ್ನ

ಈ ಪ್ರಯತ್ನದಲ್ಲಿ ದೋಷವಿರುವುದು ಸಹಜ. ವಾಚಕರು ಅವುಗಳನ್ನು ಮನ್ನಿಸಬೇಕೆಂದು ಕೋರುತ್ತೇನೆ.

ನನ್ನ ಈ ಪ್ರಯತ್ನಕ್ಕೆ ಸಂಪೂರ್ಣ ಅನುಗ್ರಹ ನೀಡಿ ಪ್ರೋತ್ಸಾಹಿಸಿದ ಶ್ರೀಮದ್ ಆಂಡವನ್ ಪೌಂಡರೀಕಪುರಂ ಸ್ವಾಮಿ ಆಶ್ರಮದ ಶ್ರೀ ಶ್ರೀ ಶ್ರೀ ಗೋಪಾಲ ಮಹಾದೇಶಿಕನ್ ಆಚಾರ್ಯರಿಗೆ ನನ್ನ ಅನಂತ ಭಕ್ತಿಪೂರ್ವಕ ಪ್ರಣಾಮಗಳು.

ಈ ಪುಸ್ತಕದ ಪಡಿ ಅಚ್ಚನ್ನು ತಿದ್ದಿ ಸೂಕ್ತ ಸಲಹೆಗಳನ್ನು ನೀಡಿರುವ ನನ್ನ ಧರ್ಮಪತ್ನಿ ಸೌ|| ಪದ್ಮಾವತಿಗೆ ಭಗವಂತನು ಸನ್ಮಂಗಳವನ್ನುಂಟು ಮಾಡಲಿ ಎಂದು ಹಾರೈಸುತ್ತೇನೆ.

ಈ ಪುಸ್ತಕವನ್ನು ಅಲ್ಪ ಸಮಯದಲ್ಲಿ ಅಂದವಾಗಿ ಮುದ್ರಿಸಿಕೊಟ್ಟ, ನಮ್ಮ ಹಿತೈಷಿಗಳಾದ ನವಭಾರತ್ ಪ್ರೆಸ್ ಮಾಲೀಕರಾದ ಶ್ರೀ ಶ್ರೀದರ್‌ರವರಿಗೂ, ನನ್ನ ಅಳಿಯ ಶ್ರೀ ಶ್ರೇಯಸ್‌ರವರಿಗೂ ಹಾಗೂ ನನ್ನ ಮಗಳಾದ ಚಿ|| ಸೌ|| ಲಕ್ಷ್ಮಿಗೂ ಭಗವಂತನು ಸಕಲ ಸೌಭಾಗ್ಯವನ್ನು ನೀಡಲಿ ಎಂದು ಪ್ರಾರ್ಥಿಸುತ್ತೇನೆ.

ಇಂತಿ

ಬೆಂಗಳೂರು
24-2-2011

ಎ. ಶ್ರೀನಿವಾಸ ರಂಗನ್

# ಸಮರ್ಪಣೆ

ಶ್ರೀ ರಾಮಾನುಜ ಪೋಷಕ, ಅಭಿನವ ಯಾಜ್ಞವಲ್ಕ,
ದೇಶಿಕ ದರ್ಶನ ಚೂಡಾಮಣಿ, ಸತ್ಸಂಪ್ರದಾಯ ಭೂಷಣ,
ಶ್ರೀ ರಾಮಾನುಜ ಸೇವಾಶ್ರೀ, ವೇದಾಂತ ರತ್ನ ವೈದಿಕ ಭೂಷಣ,
ವೇದಾಂತ ವಿದ್ಯಾ ವಾಗೀಶ, ವೇದಾಂತ ವಾಚಸ್ಪತಿ,
ವೇದಾಂತ ವಿದ್ವನ್ಮಣಿ, ವಿಶಿಷ್ಟಾದ್ವೈತ ರತ್ನಂ, ವೇದಶ್ರೀ,
ಅಭಿನವ ರಾಮಾನುಜ, ಶ್ರೀ ವೈಷ್ಣವ ಕುಲ ಸರೋಜ ದಿವಾಕರ,
ಮಹಾಮಹೋಪಾಧ್ಯಾಯ, ವೇದಾಂತ ರಕ್ಷಾಮಣಿ,
ಗುರು ಗಂಗೇಶ್ವರಾನಂದ ವೇದರತ್ನ ಪುರಸ್ಕೃತ,
ರಾಷ್ಟ್ರಪತಿ ಪ್ರಶಸ್ತಿ ಪುರಸ್ಕೃತ

## ಡಾ|| ಎನ್. ಎಸ್. ಅನಂತರಂಗಾಚಾರ್ಯಃ

*ಇವರ ಸನ್ನಿಧಿಯಲ್ಲಿ ಭಕ್ತಿಪೂರ್ವಕವಾಗಿ ಸಮರ್ಪಿಸಿದೆ.*

# ಶಾಂತಿ ಮಂತ್ರಃ

ओं आप्यायन्तु ममांगानि वाक्प्राणश्चक्षुः श्रोत्रं
अथो वलमिन्द्रियाणि च सर्वाणि ।
सर्वं व्रह्मौपनिषदं माहं व्रह्म निराकुर्या
मा मा व्रह्म निराकरोत् अनिराकरणं अस्तु अनिराकरणं मेऽस्तु ।
यदात्मनि निरते य उपनिषत्सु धर्माः
ते मयि सन्तु ते मयि सन्तु । ओं शान्तिः शान्तिः शन्तिः ॥

ನನ್ನ ದೇಹದ ಅವಯವಗಳು, ಮಾತು, ಪ್ರಾಣವು, ಕಣ್ಣು, ಕಿವಿಗಳು ಅನಂತರ ಬಲವೂ ಹಾಗೂ ಎಲ್ಲಾ ಇಂದ್ರಿಯಗಳೂ ನನಗೆ ಹಿತವಾಗಿ ಪ್ರವರ್ತಿಸಲಿ. ಬ್ರಹ್ಮದ ಎಲ್ಲಾ ವಿಷಯವು ಉಪನಿಷತ್ತಿನಲ್ಲಿ ಪ್ರತಿಪಾದಿತವಾಗಿದೆ. ನಾನು ಬ್ರಹ್ಮವಸ್ತುವನ್ನು ನಿರಾಕರಣೆ ಮಾಡದಂತೆ ಆಗಲಿ. ಬ್ರಹ್ಮವು ನನ್ನನ್ನು ನಿರಾಕರಿಸದಿರಲಿ. ಬ್ರಹ್ಮದಿಂದ ನನ್ನ ನಿರಾಕರಣೆಯಾಗದಿರಲಿ. ನನ್ನಿಂದ ಬ್ರಹ್ಮವು ನಿರಾಕರಣೆಯಾಗದಿರಲಿ. ಉಪನಿಷತ್ತುಗಳಲ್ಲಿ ಯಾವ ಧರ್ಮ ವಿಷಯವು ಹೇಳಲ್ಪಟ್ಟಿದೆಯೋ ಅವು, ಆತ್ಮನಿರತನಾದ ನನ್ನಲ್ಲಿ ಉಂಟಾಗಲಿ ಹಾಗೂ ನೆಲಸಲಿ.

ಓಂ ಶಾಂತಿಃ ಶಾಂತಿಃ ಶಾಂತಿಃ

# ಕೇನೋಪನಿಷತ್

## प्रथमः खण्डः

### ಮಂತ್ರ-1

**केनेषितं पतति प्रेषितं मनः केन प्राणः प्रथमः प्रैति युक्तः ।**
**केनेषितां वाचमिमां वदन्ति चक्षुः श्रोत्रं क उ देवो युनक्ति ॥**

*केन प्रेषितं इषितं मनः पतति केन युक्तः प्रथमः प्राणः प्रैति । केन इषितां इमां वाचं वदन्ति चक्षुः श्रोत्रं देवो युनक्ति ।*

ಯಾರಿಂದ ಪ್ರೇರಿತವಾಗಿ ಇಷ್ಟವಾದುದನ್ನು ಮನಸ್ಸು ಯೋಚಿಸುತ್ತದೆ (ಅಥವಾ ಕೆಲಸ ಮಾಡುತ್ತದೆ). ಯಾರಿಂದ ಪ್ರೇರಿಸಲ್ಪಟ್ಟು ಮುಖ್ಯಪ್ರಾಣವು ಪ್ರವರ್ತಿಸುತ್ತದೆ. ಯಾರಿಂದ ಪ್ರೇರೇಪಿಸಲ್ಪಟ್ಟು ಜನರು ಇಷ್ಟವಾದ ಮಾತನ್ನು ಹೇಳುತ್ತಾರೆ. ಕಣ್ಣು, ಕಿವಿಗಳು ಯಾವ ದೇವರಿಂದ ಪ್ರೇರೇಪಿಸಲ್ಪಟ್ಟು ವ್ಯಾಪಾರ ಮಾಡುತ್ತವೆ.

*ಈ ಉಪನಿಷತ್ತಿನಲ್ಲಿ ಪರಬ್ರಹ್ಮ ಸ್ವರೂಪವನ್ನು ಪ್ರಶ್ನೆ ಹಾಗೂ ಉತ್ತರಗಳ ಮೂಲಕ ಪ್ರಕಾಶಪಡಿಸಿದೆ. ಬ್ರಹ್ಮಜ್ಞಾನವನ್ನು ಪಡೆಯಲು ಇಂದ್ರಿಯಗಳು ಸಾಧನಗಳಾಗಿವೆ. ಕಣ್ಣು, ಕಿವಿ ಮೊದಲಾದ ಜಡವಾದ ಇಂದ್ರಿಯಗಳು ಚೇತನನಿಂದ ಪ್ರೇರೇಪಿಸಲ್ಪಡದೇ, ತಮ್ಮ ಕಾರ್ಯಗಳನ್ನು ನಿರ್ವಹಿಸಲಾರವು. ಆದ್ದರಿಂದ ಶಿಷ್ಯನು ಆಚಾರ್ಯನನ್ನು ಸಮೀಪಿಸಿ "ಬ್ರಹ್ಮಜ್ಞಾನ ಪ್ರಾಪ್ತಿಗೆ ಸಾಧನವಾದ ಈ ಇಂದ್ರಿಯಗಳ ಪ್ರೇರಕನಾರು?" ಎಂದು ಪ್ರಶ್ನಿಸುತ್ತಾನೆ.*

### ಮಂತ್ರ-2

**श्रोत्रस्य श्रोत्रं मनसो मनो यत् वाचो ह वाचं स उ प्राणस्य प्राणः ।**
**चक्षुषश्चक्षुः अतिमुच्य धीराः प्रेत्यास्माल्लोकादमृता भवन्ति ॥**

*श्रोत्रस्य श्रोत्रं स उ मनसा मनः वाचो ह वाचं प्राणस्य प्राणः चक्षुषः चक्षुः धीराः अतिमुच्य प्रेत्य अस्माल्लोकात् अमृता भवन्ति ।*

ಈ ಕಿವಿಯನ್ನು ಪ್ರಕಾಶಪಡಿಸುವ ಕಿವಿಯಾಗಿ ಪರಮಾತ್ಮನು ಇದ್ದಾನೆ. ಮನಸ್ಸು ವ್ಯಾಪಾರ ಮಾಡುವಂತೆ ಪ್ರೇರೇಪಿಸುವ ಮನಸ್ಸಾಗಿ ಪರಮಾತ್ಮನು ಇದ್ದಾನೆ. ವಾಕ್ಕಿನ ವ್ಯಾಪಾರವನ್ನು ಪ್ರೇರೇಪಿಸುವ ವಾಕ್ಕು ಪರಮಾತ್ಮನೇ ಆಗಿದ್ದಾನೆ. ಪ್ರಾಣವನ್ನು ಎಲ್ಲೆಡೆಯೂ ಸಂಚರಿಸುವಂತೆ (ಶರೀರ ಧಾರಣೆ ಮಾಡುವ) ಶಕ್ತಿಯಿತ್ತವನು ಪರಮಾತ್ಮನೇ ! ಕಣ್ಣುಗಳಿಗೆ ನೋಡುವ ಶಕ್ತಿ ಕೊಟ್ಟವನು ಪರಮಾತ್ಮನೇ. ಜ್ಞಾನಿಗಳು ಈ ತತ್ತ್ವವನ್ನು ತಿಳಿದವರಾಗಿ ಶರೀರ ತ್ಯಾಗ ಮಾಡಿ ಈ ಲೋಕದಿಂದ ಅರ್ಚೀರಾದಿಯಲ್ಲಿ ಸಂಚರಿಸಿ ಪರಮಪದವನ್ನು ಸೇರಿ ಮುಕ್ತರಾಗುತ್ತಾರೆ.

*ಶಿಷ್ಯನ ಪ್ರಶ್ನೆಗೆ ಆಚಾರ್ಯರು ಈ ರೀತಿಯಾಗಿ ಉತ್ತರಿಸುತ್ತಾರೆ. "ಯಾವುದು ಕಣ್ಣು ಮೊದಲಾದವುಗಳಿಗೆ ಪ್ರಕಾಶ ನೀಡುವುದೋ, ಯಾವುದರ ಪ್ರಕಾಶವು ಕಣ್ಣು ಮೊದಲಾದ ಇಂದ್ರಿಯಗಳಿಗೆ ಅಧೀನವಲ್ಲವೋ, ಆ ಬ್ರಹ್ಮ ಸ್ವರೂಪವನ್ನು ಜ್ಞಾನಿಗಳು ತಿಳಿದು, ಈ ಲೋಕದಿಂದ ಶರೀರ ತ್ಯಾಗಮಾಡಿ ಅರ್ಚೀರಾದಿ ಮಾರ್ಗವಾಗಿ ಪರಮ ಪದವನ್ನು ಸೇರಿ ಮುಕ್ತರಾಗುತ್ತಾರೆ."*

## ಮಂತ್ರ - 3

**न तत्र चक्षुर्गच्छति न वाग्गच्छति नो मनो ।**
**न विद्मो न विजानीमो यथैतदनुशिष्यात् ॥**

*तत्र चक्षुः न गच्छति वाक् न गच्छति मनः न (तत्र गच्छति) यथा न विद्मः न विजानीमः एतत् अनुशिष्यात् ।*

ಆ ಬ್ರಹ್ಮನನ್ನು (ತಿಳಿಯುವ ವಿಷಯದಲ್ಲಿ) ಕಣ್ಣು ಸಮೀಪಿಸುವುದಿಲ್ಲ. ಮಾತುಗಳು ಅವನನ್ನು ಸಮೀಪಿಸುವುದಿಲ್ಲ. ಮನಸ್ಸು ಅವನನ್ನು

ಸಮೀಪಿಸುವುದಿಲ್ಲ. ಬ್ರಹ್ಮದ ಸ್ವರೂಪವನ್ನು ಅಂತರಿಂದ್ರಿಯಗಳು ಹಾಗೂ ಬಾಹ್ಯೇಂದ್ರಿಯಗಳು ತಿಳಿಯಲಾರವು. ಆ ಪರಬ್ರಹ್ಮವಸ್ತುವನ್ನು (ಕಣ್ಣು ಮೊದಲಾದ ಇಂದ್ರಿಯಗಳಿಗೆ ಗೋಚರವಾಗದಿರುವುದರಿಂದ) ಹೇಗೆ ಉಪದೇಶಿಸಬೇಕೆಂದು ತಿಳಿದಿಲ್ಲ.

*ಈ ಪರಬ್ರಹ್ಮನನ್ನು ಹೇಗೆ ಉಪದೇಶಿಸಬೇಕೆಂಬ ಶಿಷ್ಯನ ಪ್ರಶ್ನೆಗೆ "ಈ ಬ್ರಹ್ಮವಸ್ತುವನ್ನು ಅಂತರಿಂದ್ರಿಯಗಳಿಂದಲೂ, ಬಾಹ್ಯೇಂದ್ರಿಯಗಳಿಂದಲೂ ತಿಳಿಯಲು ಸಾಧ್ಯವಿಲ್ಲ." ಎಂದರೆ ಆಚಾರ್ಯರು ಉಪದೇಶಿಸತಕ್ಕದು ಎಂದು ತಿಳಿಸಿದೆ.*

## ಮಂತ್ರ - 4

अन्यदेव तत् विदितात् अथो अविदितात् अधि ।
इति शुश्रुम पूर्वेषां ये नस्तद्व्याचचक्षिरे ॥

*तत् ये पूर्वेषां नः व्याचचक्षिरे इति शुश्रुम तत् विदितात् अन्यत् अधि अथ अविदितात् ।*

ಆ ಬ್ರಹ್ಮವನ್ನು ಯಾವ ಪೂರ್ವಾಚಾರ್ಯರು ನಮಗೆ ವ್ಯಾಖ್ಯಾನ ಮಾಡಿ ಹೇಳಿದರೋ, ಅವರಿಂದ ಹೀಗೆಂದು ಕೇಳಿದ್ದೇವೆ. (ಹೇಗೆಂದರೆ) ಆ ಬ್ರಹ್ಮವಸ್ತುವು ನಮಗೆ ತಿಳಿದು ಬಂದಿರುವ ಎಲ್ಲಾ ವಿಧವಾದ ಪದಾರ್ಥಕ್ಕಿಂತಲೂ ವಿಲಕ್ಷಣವಾದುದು ಹಾಗೂ ತಿಳಿಯದೆ ಇರುವ ಪದಾರ್ಥಗಳಿಗಿಂತಲೂ ವಿಲಕ್ಷಣವಾದುದು.

*ಬ್ರಹ್ಮವಸ್ತುವು ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ ಪ್ರಮಾಣಗಳಿಂದ ತಿಳಿಯಲ್ಪಡುವುದಿಲ್ಲ. ಈ ಪ್ರಪಂಚದಲ್ಲಿರುವ ಯಾವುದೇ ವಿಚಿತ್ರ ವಸ್ತುವನ್ನೂ, ಸಂಗತಿಯನ್ನೂ ದೃಷ್ಟಾಂತವಾಗಿ ಕೊಟ್ಟು ಬ್ರಹ್ಮ ಸ್ವರೂಪವನ್ನು ತಿಳಿಸಲು ಸಾಧ್ಯವಿಲ್ಲ. ಆದ್ದರಿಂದ ಈ ಮಂತ್ರದಲ್ಲಿ "ನಮ್ಮ ತಿಳುವಳಿಕೆಗೆ ಬಂದಿರುವ*

ಹಾಗೂ ಬಾರದಿರುವ ಎಲ್ಲಾ ವಸ್ತು ವಿಶೇಷಗಳಿಗಿಂತಲೂ ಈ ಬ್ರಹ್ಮ ಸ್ವರೂಪವು ವಿಲಕ್ಷಣವು" ಎಂದು ಪ್ರತಿಪಾದಿಸಲಾಗಿದೆ.

ಮಂತ್ರ - 5

यद्वाचाऽनभ्युदितं येन वागभ्युद्यते ।
तदेव ब्रह्म त्वं विद्धि नेदं यदिदमुपासते ॥

*वाचा यत् न अभ्युदितं येन वाक् अभ्युद्यते तदेव ब्रह्म इति त्वं विद्धि । यत् "इदं" इति उपासते तत् न ब्रह्म ।*

ವಾಕ್ ಇಂದ್ರಿಯದಿಂದ ಯಾವ ಬ್ರಹ್ಮವಸ್ತುವು ಪ್ರಕಾಶಿಸಲ್ಪಡುವುದಿಲ್ಲವೋ, ಯಾವ ಬ್ರಹ್ಮನಿಂದ ವಾಗಿಂದ್ರಿಯವು ಪ್ರಕಾಶಿಸಲ್ಪಡುತ್ತದೋ, ಅದನ್ನೇ ಬ್ರಹ್ಮವೆಂದು ತಿಳಿ. ಯಾವುದನ್ನು "ಈ ಆಕಾರದಿಂದ ಕೂಡಿದೆ" ಎಂದು ಉಪಾಸನೇ ಮಾಡುತ್ತಾರೋ, ಅದು ಬ್ರಹ್ಮವಲ್ಲ.

*ಪರಮಾತ್ಮನ ಸ್ವರೂಪವು ವಾಗಿಂದ್ರಿಯ ಸಹಾಯದಿಂದ ಪ್ರಕಾಶಿಸಲ್ಪಡುವುದಿಲ್ಲ. ವಾಕ್ ಮೊದಲಾದ ಇಂದ್ರಿಯಗಳಿಂದ ಪ್ರಕಾಶಿಸಲ್ಪಡಲಾಗದೋ, ಯಾವುದು ವಾಕ್ ಮೊದಲಾದ ಇಂದ್ರಿಯಗಳನ್ನೂ ಪ್ರಕಾಶಪಡಿಸುತ್ತದೆಯೋ ಅದೇ ಬ್ರಹ್ಮವೆಂದು ತಿಳಿಯಲ್ಪಡುತ್ತದೆ.*

ಮಂತ್ರ - 6

यन्मनसा न मनुते येनाहुर्मनो मतम् ।
तदेव ब्रह्म त्वं विद्धि नेदं यदिदमुपासते ॥

*मनसा यत् न मनुते येन मनः मतम् आहुः तत एव ब्रह्म त्वं विद्धि । यत् "इदं" इति उपासते तत् न ब्रह्म ।*

ಮನಸ್ಸಿನಿಂದ ಯಾವ ಬ್ರಹ್ಮಸ್ವರೂಪವನ್ನು ತಿಳಿಯಲಾಗುವುದಿಲ್ಲವೋ, ಯಾವ ಬ್ರಹ್ಮನಿಂದ ಮನಸ್ಸು ತಿಳಿಯಲ್ಪಡುತ್ತದೆಯೋ ಅದನ್ನೇ ನೀನು ಬ್ರಹ್ಮವೆಂದು ತಿಳಿ. ಯಾವ ವಸ್ತುವನ್ನು "ಈ ಆಕಾರದಿಂದ ಕೂಡಿದೆ" ಎಂದು ಉಪಾಸನೇ ಮಾಡುತ್ತಾರೋ ಅದು ಬ್ರಹ್ಮವಲ್ಲ.

*ಪರಮಾತ್ಮನಿಂದ ಪ್ರೇರ್ರಿತವಾದ ಮನಸ್ಸು, ಇತರ ವಿಷಯಗಳನ್ನು ತಿಳಿಯುವ ಸಾಮರ್ಥ್ಯ ಹೊಂದುತ್ತದೆ. ಆದರೆ ಮನಸ್ಸಿನಿಂದ ಪರಮಾತ್ಮನ ಸ್ವರೂಪವನ್ನು ತಿಳಿಯಲು ಸಾಧ್ಯವಿಲ್ಲ. ಪರಮಾತ್ಮನ ಸ್ವರೂಪವು ಮನಸ್ಸಿಗೂ ಮೀರಿದುದು.*

ಮಂತ್ರ - 7

**यच्चक्षुषा न पश्यति येन चक्षूंषि पश्यति ।**
**तदेव ब्रह्म त्वं विद्धि नेदं यदिदमुपासते ॥**

*चक्षुषा यत् न पश्यति येन चक्षुंषि पश्यति तत् एव ब्रह्म त्वं विद्धि । यत् "इदं" इति आसते तत् न ब्रह्मा।*

ಕಣ್ಣಿನಿಂದ ಯಾವ ಬ್ರಹ್ಮಸ್ವರೂಪವನ್ನು ನೋಡಲಾಗುವು ದಿಲ್ಲವೋ, ಯಾವ ಬ್ರಹ್ಮನ ಪ್ರೇರಣೆಯಿಂದ ಕಣ್ಣು ನೋಡಲ್ಪಡುತ್ತದೆಯೋ, ಅದನ್ನೇ ಬ್ರಹ್ಮವೆಂದು ನೀನು ತಿಳಿ. ಯಾವ ವಸ್ತುವನ್ನು "ಈ ಆಕಾರದಿಂದ ಕೂಡಿದೆ" ಎಂದು ಉಪಾಸನೆ ಮಾಡುತ್ತಾರೋ ಅದು ಬ್ರಹ್ಮವಲ್ಲ.

*ನಮ್ಮ ಕಣ್ಣುಗಳಿಗೆ ನೋಡುವ ಶಕ್ತಿಯನ್ನು ಪರಮಾತ್ಮನು ನೀಡುತ್ತಾನೆ. ಆದರೆ ಆವನ ಸ್ವರೂಪವನ್ನು ನಮ್ಮ ಕಣ್ಣುಗಳಿಂದ ನೋಡಲಾಗುವುದಿಲ್ಲ ಎಂಬ ಭಾವ.*

ಮಂತ್ರ - 8

**यच्छ्रोत्रेण न श्रृणोति येन श्रोत्रमिदं श्रुतम् ।**
**तदेव ब्रह्म त्वं विद्धि नेदं यदिदमुपासते ॥**

*श्रोत्रेण यत् न श्रृणोति येन इदं श्रोत्रं श्रुतम भवति तत् ब्रह्म त्वं विद्धि । यत् 'इदं' इति उपासते तत् न ब्रह्म ।*

ಶ್ರೋತ್ರೇಂದ್ರಿಯದಿಂದ ಯಾವ ಬ್ರಹ್ಮವಸ್ತುವು ಕೇಳಲಾರದೋ, ಯಾವ ಬ್ರಹ್ಮವಸ್ತುವಿನ ಪ್ರೇರಣೆಯಿಂದ ಶ್ರೋತ್ರೇಂದ್ರಿಯವು ಕೇಳುವ ಶಕ್ತಿ ಪಡೆಯುತ್ತದೆಯೋ ಅದನ್ನು ನೀನು ಬ್ರಹ್ಮವೆಂದು ತಿಳಿ. ಯಾವ ವಸ್ತುವನ್ನು "ಈ ಆಕಾರದಿಂದ ಕೂಡಿದೆ" ಎಂದು ಉಪಾಸನೆ ಮಾಡುತ್ತಾರೋ ಅದು ಬ್ರಹ್ಮವಲ್ಲ.

*ನಮ್ಮ ಶ್ರೋತ್ರೇಂದ್ರಿಯಕ್ಕೂ ಕೇಳುವ ಶಕ್ತಿಯನ್ನು ಕೊಡುವವನು ಪರಮಾತ್ಮನೇ. ಬ್ರಹ್ಮ ಸ್ವರೂಪವು ಈ ಶ್ರೋತೇಂದ್ರಿಯಕ್ಕೂ ಮೀರಿರುವುದರಿಂದ ಶ್ರೋತ್ರೇಂದ್ರಿಯ ಸಹಾಯದಿಂದ ಪರಬ್ರಹ್ಮ ಸ್ವರೂಪವನ್ನು ತಿಳಿಯಲು ಸಾಧ್ಯವಿಲ್ಲ.*

## ಮಂತ್ರ - 9

**यत्प्राणेन न प्राणिति येन प्राणः प्रणीयते ।**
**तदेव ब्रह्म त्वं विद्धि नेदं यदिदमुपासते ॥**

*प्राणेन यत् न प्राणिति येन प्राणः प्रणीयते तत एव ब्रह्म इति त्वं विद्धि । यत् 'इदं' इति उपासीत तत् न ब्रह्म ।*

ಪ್ರಾಣವಾಯುವಿನಿಂದ ಯಾವ ಬ್ರಹ್ಮವಸ್ತುವು ಉಸಿರಾಡು ವುದಿಲ್ಲವೋ, ಯಾವ ಬ್ರಹ್ಮನ ಪ್ರೇರಣೆಯಿಂದ ಪ್ರಾಣವಾಯುವು ಉಸಿರಾಡುತ್ತದೆಯೋ, ಅದನ್ನೇ ಬ್ರಹ್ಮವೆಂದು ನೀನು ತಿಳಿ. ಯಾವ ವಸ್ತುವನ್ನು "ಈ ಆಕಾರದಿಂದ ಕೂಡಿದೆ" ಎಂದು ಉಪಾಸನೆ ಮಾಡುತ್ತಾರೋ ಅದು ಬ್ರಹ್ಮವಲ್ಲ.

*ಪ್ರಾಣಕ್ಕೆ ಉಸಿರಾಡುವ ಶಕ್ತಿಯನ್ನು ಪರಮಾತ್ಮನು ಅನುಗ್ರಹಿಸಿದ್ದಾನೆ. ಆದರೆ ಪ್ರಾಣವಾಯುವಿನಿಂದ ಪರಬ್ರಹ್ಮ ಸ್ವರೂಪವು ನಿರೂಪಿಸಲಾಗುವುದಿಲ್ಲ.*

## द्वितीयः खण्डः

### ಮಂತ್ರ - 1

**यदि मन्यसे सुवेदेति दभ्रमेवापि नूनं त्वं वेत्थ ब्रह्मणो रूपम् ।**
**यदस्य त्वं यदस्य देवंष्वथ नु मीमांस्यमेव ते मन्ये विदितम् ॥**

*यदि (ब्रह्मरूपं) सुवेद इति त्वं मन्यसे त्वं नूनं दभ्रमेव अस्य ब्रह्मणः रूपम् यदि वेत्थ अस्य देवंष्वथ (दभ्रमेव) अथ नु ते मीमांस्यमेव विदितम् मन्ये ।*

ಒಂದು ವೇಳೆ "ಪರಬ್ರಹ್ಮರೂಪವನ್ನು ಚೆನ್ನಾಗಿ ತಿಳಿದಿರುತ್ತೇನೆ" ಎಂದು ನೀನು ತಿಳಿಯುವುದಾದರೆ, ನೀನು ನಿಜವಾಗಿಯೂ ಅತ್ಯಲ್ಪವಾಗಿಯೋ ತಿಳಿದಿರುತ್ತಿಯೆ. ಈ ಪರಬ್ರಹ್ಮರೂಪವನ್ನು ನೀನು ಈ ಲೋಕದಲ್ಲಿ ಯಾವುದೆಂದು ತಿಳಿದಿರುತ್ತಿಯೋ, ಈ ಬ್ರಹ್ಮದ ರೂಪವನ್ನು ದೇವಲೋಕದಲ್ಲಿ ಯಾವುದೆಂದು ತಿಳಿದಿರುತ್ತೀಯೋ ಅದು ಅತ್ಯಲ್ಪವೇ ಆಗಿರುತ್ತದೆ. ಆದ್ದರಿಂದ ನಿನ್ನಿಂದ ಬ್ರಹ್ಮಸ್ವರೂಪವೂ ವಿಚಾರಿಸಿ ತಿಳಿಯಲ್ಪಡತಕ್ಕದಾಗಿದೆ (ಎಂದು ಆಚಾರ್ಯರು ಶಿಷ್ಯರಿಗೆ ಹೇಳಿದರು). (ಅದಕ್ಕೆ ಶಿಷ್ಯನು) "ಬ್ರಹ್ಮಸ್ವರೂಪವು ಸರಿಯಾಗಿ ತಿಳಿದಿರಲಿಲ್ಲ ಈಗ ಅರ್ಥಪೂರ್ವವಾಗಿ ಆಲೋಚಿಸಿದ ನಂತರ ತಿಳಿಯಿತು" ಎಂದು ಭಾವಿಸುತ್ತೇನೆ.

*ಈ ಮಂತ್ರದಲ್ಲಿ ಬ್ರಹ್ಮವನ್ನು ಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲ ಎಂದು ತಿಳಿಸಿದೆ. ಶಿಷ್ಯನಿಗೆ ಆಚಾರ್ಯರು ಹೇಳುತ್ತಾರೆ, "ನಾನು ಬ್ರಹ್ಮಸ್ವರೂಪವನ್ನು ಇಲ್ಲವೇ ಪರಬ್ರಹ್ಮದ ಯಾವುದೇ ರೂಪವನ್ನು ಚೆನ್ನಾಗಿ ತಿಳಿದಿದ್ದೇನೆ" ಎಂದು ನೀನು ಹೇಳುವುದಾದರೇ, ನೀನು ತಿಳಿದಿರುವುದು ಬಹಳ ಅಲ್ಪವೇ. ಬ್ರಹ್ಮಸ್ವರೂಪವು ಅನಂತವಾದುದು. ಅದನ್ನು ಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲ. ಆಚಾರ್ಯರ ಹೇಳಿಕೆಗೆ ಶಿಷ್ಯನು "ಈಗ ನಾನು ಬ್ರಹ್ಮಸ್ವರೂಪವನ್ನು ತಿಳಿದಿರುವೆನೆಂದು ಭಾವಿಸುತ್ತೇನೆ" ಎಂದು ಹೇಳುತ್ತಾನೆ.*

## ಮಂತ್ರ - 2

**नाहं मन्ये सुवेदेति नो न वेदेति वेद च ।**
**यो नस्तद्वेद तद्वेद नो न वेदेति वेद च ॥**

*अहं सुवेद इति न मन्ये न वेद इति न (मन्ये) नः यः न वेद च वेद इति तत् वेद सः तत् वेद ।*

ನಾನು ಬ್ರಹ್ಮವನ್ನು ಚೆನ್ನಾಗಿ ತಿಳಿದಿರುವೆನೆಂದು (ಹೇಳುವನು) ತಿಳಿಯಲಿಲ್ಲ. ನಾನು ಬ್ರಹ್ಮವನ್ನು ತಿಳಿದಿಲ್ಲ ಎಂದೂ (ಹೇಳುವನು) ತಿಳಿಯಲಿಲ್ಲ. ನಮ್ಮ ಶಿಷ್ಯರಲ್ಲಿ ಯಾರು ಬ್ರಹ್ಮಸ್ವರೂಪವನ್ನು ತಿಳಿದಿಲ್ಲ ಹಾಗೂ ಸ್ವಲ್ಪ ತಿಳಿದಿದೆ ಎಂಬ ತತ್ತ್ವಾರ್ಥವನ್ನು ತಿಳಿದಿದ್ದಾನೋ ಅವನು ಆ ಬ್ರಹ್ಮವನ್ನು ತಿಳಿದಿರುತ್ತಾನೆ.

*ಅನಂತವಾದ ಬ್ರಹ್ಮ ಸ್ವರೂಪವನ್ನು ಸಂಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲ ಎಂಬ ನಿರೂಪಣೆ ಇದೆ. ಯಾರು "ಪರಬ್ರಹ್ಮ ಸ್ವರೂಪವನ್ನು ಚೆನ್ನಾಗಿ ತಿಳಿದಿದ್ದೇನೆ" ಎಂದು ಹೇಳುತ್ತಾನೋ ಅವನಿಗೆ ಬ್ರಹ್ಮ ಸ್ವರೂಪ ತಿಳಿದಿಲ್ಲ. ಆದರೆ ಯಾರು "ಬ್ರಹ್ಮ ಸ್ವರೂಪವನ್ನು (ಪೂರ್ಣವಾಗಿ) ತಿಳಿದಿಲ್ಲ ಹಾಗೂ (ಸ್ವಲ್ಪ) ತಿಳಿದಿದ್ದೇನೆ" ಎಂಬ ಜ್ಞಾನವನ್ನು ಹೊಂದಿರುವವರೋ ಅವರೇ ಬ್ರಹ್ಮ ಸ್ವರೂಪವನ್ನು ತಿಳಿಯಬಲ್ಲರು.*

## ಮಂತ್ರ - 3

**यस्यामतं तस्य मतं मतं यस्य न वेद सः ।**
**अविज्ञातं विजानतां विज्ञातं अविजानताम् ॥**

*यस्य अमतं तस्य मतं यस्य मतं सः न वेद विजानतां अविज्ञातं अविजानताम् विज्ञातं ।*

ಯಾರಿಗೆ ಬ್ರಹ್ಮ ಸ್ವರೂಪವು ತಿಳಿಯಲಾಗದೆಂದು ತಿಳಿದಿದೆಯೋ ಅವನಿಗೆ ಬ್ರಹ್ಮ ಸ್ವರೂಪವು ತಿಳಿದಿದೆ. ಯಾರಿಗೆ ಬ್ರಹ್ಮಸ್ವರೂಪವು ತಿಳಿದಿದೆ ಎಂಬ

ಭಾವನೆಯಿದೆಯೋ ಅವನಿಗೆ ಬ್ರಹ್ಮ ಸ್ವರೂಪವು ತಿಳಿದಿರುವುದಿಲ್ಲ. ಪೂರ್ಣವಾಗಿ ಬ್ರಹ್ಮಸ್ವರೂಪವು ತಿಳಿದಿದೆ ಎಂಬುವನಿಗೆ ಬ್ರಹ್ಮ ಸ್ವರೂಪವು ತಿಳಿದಿರುವುದಿಲ್ಲ. ಬ್ರಹ್ಮಸ್ವರೂಪವೂ ಪರಿಚ್ಛಿನ್ನವಾಗಿ ತಿಳಿದಿರುವವನಿಗೆ ಬ್ರಹ್ಮ ಸ್ವರೂಪವು ತಿಳಿದಿದೆ.

*ಪೂರ್ಣವಾಗಿ ಬ್ರಹ್ಮವನ್ನು ತಿಳಿದಿದ್ದೇನೆ ಎನ್ನುವನಿಗೆ ಬ್ರಹ್ಮದ ಅರಿವು ಆಗಿರುವುದಿಲ್ಲ. "ಪೂರ್ಣವಾಗಿ ತಿಳಿದಿಲ್ಲ ಆದರೆ ಸ್ವಲ್ಪ ಅರಿವಾಗಿದೆ" ಎನ್ನುವನಿಗೆ ಅದರ ಅರಿವಾಗಿರುತ್ತದೆ (ಬ್ರಹ್ಮವನ್ನು ತಿಳಿದಿಲ್ಲ ಎಂದರೆ ಬ್ರಹ್ಮವನ್ನು ಸಂಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲವೆ ಹೊರತು ಬ್ರಹ್ಮವನ್ನು ತಿಳಿಯಲು ಸಾಧ್ಯವಿಲ್ಲವೆಂದಲ್ಲ). ಇದರಿಂದ ಬ್ರಹ್ಮವು ಅಪರಿಚ್ಛಿನ್ನವಾದುದೆಂದು, ಕಾಲ ದೇಶ ಮತ್ತು ಭೇದವಿಲ್ಲವೆಂದು ತಿಳಿಯುತ್ತದೆ. ಅದನ್ನು ಬೇರೆಯಾಗಿ ಪರಿಚ್ಛಿನ್ನವಾಗಿ ತಿಳಿಯಕೂಡದೆಂದು ಇಲ್ಲಿ ಹೇಳಿದೆ. "ಅದರ ಮಹಿಮೆ ಅದಕ್ಕೆ ಗೊತ್ತಿಲ್ಲ" ಎಂದ ಮೇಲೆ ಬೇರೆ ಯಾರು ಅದನ್ನು ಪೂರ್ಣವಾಗಿ ಅರಿಯಬಲ್ಲರು ?*

## ಮಂತ್ರ - 4

**प्रतिबोधविदितं मतं अमृतत्वं हि विन्दते |**
**आत्मना विन्दते वीर्यं विद्यया विन्दतेऽमृतम् ||**

*प्रतिबोधविदितं मतं अमृतत्वं विन्दते हि आत्मना वीर्यं विन्दते विद्यया अमृतम् विन्दते |*

(ಸತ್ಯ-ಜ್ಞಾನ ಅಮೃತತ್ವಗಳೆಂಬ) ಬ್ರಹ್ಮಗುಣಗಳನ್ನು ಸ್ವರೂಪವನ್ನೂ ಯೋಚಿಸಿದಾಗ (ಉಪಾಸನೆಯಿಂದ) ತಿಳಿದು ಬರುವ ಜ್ಞಾನದಿಂದ ಮೋಕ್ಷವನ್ನು ಪಡೆಯುತ್ತಾನೆ. ಆ ಪರಮಾತ್ಮನಿಂದ (ಬ್ರಹ್ಮ ವಿದ್ಯೆಯನ್ನು) ಪಡೆಯಲು ಶಕ್ತಿ ಪಡೆದುಕೊಳ್ಳುತ್ತಾನೆ. ಉಪಾಸನೆಯಿಂದ ಮೋಕ್ಷವನ್ನು ಪಡೆಯುತ್ತಾನೆ.

*ಬ್ರಹ್ಮ ಸ್ವರೂಪವನ್ನು ತಿಳಿಯುವ ಬಗೆ ಹೇಗೆ ? ಹಾಗೂ ಮೋಕ್ಷವನ್ನು ಪಡೆಯುವ ಮಾರ್ಗವನ್ನು ಇಲ್ಲಿ ಹೇಳಿದೆ. ಈ ಮಂತ್ರದಲ್ಲಿ ಉಪಾಸನೆಯ ಮಹತ್ತ್ವವನ್ನು ಹೇಳಿದೆ. ಉಪಾಸನೆಯಲ್ಲಿ ಬ್ರಹ್ಮ ವಸ್ತುವಿನ ಸ್ವರೂಪ, ರೂಪ, ಗುಣ, ವಿಭೂತಿ ಇವುಗಳನ್ನು ಚಿಂತನೆ ಮಾಡಬೇಕು. ಆಗ ಬ್ರಹ್ಮ ಸ್ವರೂಪದ ಅರಿವಾಗುವುದು. ವಿದ್ಯಾ ಎಂದರೆ ಉಪಾಸನೆ. ಉಪಾಸನೆಯನ್ನು ಮಾಡಲು ಶಕ್ತಿ ಕೊಡುವವನು ಪರಮಾತ್ಮನೇ. ಉಪಾಸನೆಯಿಂದ ಪರಮಾತ್ಮನ ದಯೆಯು ನಮಗೆ ಪ್ರಾಪ್ತಿಯಾಗುವುದರಿಂದ ಸಂಸಾರದ ಬಂಧನಕ್ಕೆ ಕಾರಣವಾದ ಕರ್ಮಗಳ ನಾಶವಾಗಿ ಮೋಕ್ಷ ಪ್ರಾಪ್ತಿಯಾಗುತ್ತದೆ.*

## ಮಂತ್ರ - 5

**इह चेदवेदीत् अथ सत्यमस्ति नचेदिहावेदीत् महती विनष्टिः ।**
**भूतेषु भूतेषु विचित्य धीराः प्रेत्यास्माल्लोकात् अमृता भवन्ति ॥**

*इह अवेदीत् चेत् अथ सत्यम् अस्ति इह न अवेदीत् चेत् महति विनष्टिः भूतेषु भूतेषु विचित्य धीराः अस्मान् लोकात् प्रेत्य अमृता भवन्ति ।*

**ಈ ಲೋಕದಲ್ಲಿ ಈಗ ಬ್ರಹ್ಮಸ್ವರೂಪವನ್ನು ತಿಳಿದುಕೊಂಡಿದ್ದಾದರೆ (ಈ ಜನ್ಮದ) ಅನಂತರವೇ ಸತ್ಯರೂಪವಾದ ಬ್ರಹ್ಮಪ್ರಾಪ್ತಿಯಾಗುತ್ತದೆ. ಇಲ್ಲಿ ಈಗ ತಿಳಿದುಕೊಳ್ಳದೇ ಹೋದರೆ ಮಹತ್ತರ ನಷ್ಟವಾಗುತ್ತದೆ. ಚೇತನ ಅಚೇತನ ಎಂಬ ಪದಾರ್ಥಗಳಲ್ಲಿ (ತಮಗಿಂತಲೂ ಭಿನ್ನವಾದ ವಿಲಕ್ಷಣವೆಂದು) ಭಾವಿಸಿ ಜ್ಞಾನಿಗಳು ಈ ಲೋಕದಿಂದ ಈ ಶರೀರವನ್ನು ತ್ಯಜಿಸಿ ಮುಕ್ತರಾಗಿ ಮೋಕ್ಷವನ್ನು ಪಡೆಯುತ್ತಾರೆ.**

*ಈ ಮಂತ್ರದಲ್ಲಿ ಆತ್ಮಜ್ಞಾನವನ್ನು ಕಡೆಮಾಡದೆ ಪ್ರಯತ್ನಿಸಿ, ಸಂಪಾದಿಸಬೇಕೆಂದು ನಿರ್ದಿಷ್ಟವಾಗಿ ಹೇಳಿದೆ. ಮನುಷ್ಯಜನ್ಮ ಪ್ರಾಪ್ತಿಯಾಗಿರುವಾಗ ಈ ಜ್ಞಾನವನ್ನು ಪಡೆದರೆ ದೇಹತ್ಯಾಗ ಮಾಡಿದ ಮೇಲೆ*

ಅರ್ಚಿರಾದಿ ಮಾರ್ಗವಾಗಿ ಪರಮಪದದಲ್ಲಿ ಬ್ರಹ್ಮವನ್ನು ಸೇರಿ ಬ್ರಹ್ಮಾನಂದವನ್ನು ಹೊಂದುತ್ತಾನೆ. ಇಲ್ಲದಿದ್ದರೆ ಮಹತ್ತರವಾದ ನಷ್ಟ ಉಂಟಾಗುತ್ತದೆ. ಬ್ರಹ್ಮಪ್ರಾಪ್ತಿಯೇ ಮಹತ್ತರವಾದ ಲಾಭ.

ಈ ಉಪನಿಷತ್ತಿನಲ್ಲಿ ಈ ಮಂತ್ರವು ಬಹಳ ಮುಖ್ಯವಾದ ಸಂದೇಶವನ್ನು ನೀಡುತ್ತದೆ.

## तृतीयः खण्डः

### ಮಂತ್ರ - 1

**ब्रह्म ह देवेभ्यो विजिग्ये तस्य ह ब्रह्मणो विजये देवा अमहीयन्त |**
**त ऐक्षन्त अस्माकमेवायं विजयो अस्माकमेवायं महिमेति ||**

*ब्रह्म देवेभ्यः विजिग्ये तस्य ब्रह्मणो विजये देवा अमहीयन्त ते विजयो अस्माकं इति ऐक्षन्त अयम् महिमा अस्माकमेव इति |*

ಬ್ರಹ್ಮವು ದೇವತೆಗಳಿಗಾಗಿ ಜಯವನ್ನು ಸಂಪಾದಿಸಿತು. ಆ ಬ್ರಹ್ಮದ ಜಯದಲ್ಲಿ ದೇವತೆಗಳು ಮಹಿಮೆಯನ್ನು ಹೊಂದಿದರು (ಅಂದರೆ ಅಹಂಕಾರ ಪಟ್ಟರು) ಅವರು ಆ ಜಯವು ನಮ್ಮದೇ (ನಾವು ಸಂಪಾದಿಸಿರುವುದು) ಎಂದು ತಿಳಿದರು. ಈ ಜಯವನ್ನು ಪಡೆಯುವ ಸಾಮರ್ಥ್ಯವು ನಮ್ಮದೇ ಎಂದು ತಿಳಿದರು.

ದೇವತೆಗಳಿಗೂ ಅಸುರರಿಗೂ ಯುದ್ಧ ನಡೆದ ಸಂದರ್ಭದಲ್ಲಿ ಬ್ರಹ್ಮವು ದೇವತೆಗಳಿಗೆ ಜಯವನ್ನು ಅನುಗ್ರಹಿಸಿತು. (ಅಂದರೆ ದೇವತೆಗಳಲ್ಲಿ ಬ್ರಹ್ಮವು ಅಂತರ್ಯಾಮಿಯಾಗಿ ಇದ್ದು ಶಕ್ತಿ ಪಡೆಯುವ ಚೈತನ್ಯವನ್ನು ಕೊಟ್ಟಿತು) ಆದರೆ ದೇವತೆಗಳು ತಮ್ಮ ಅಜ್ಞಾನದಿಂದ "ಈ ಜಯವು ನಮ್ಮ ಶಕ್ತಿಯಿಂದಲೇ ಉಂಟಾಯಿತು" ಎಂಬುದಾಗಿ ತಿಳಿದು ಗರ್ವಿತರಾದರು.

## ಮಂತ್ರ - 2

**तद्धैषां विजज्ञौ तेभ्यो ह प्रादुर्बभूव ।
तन्न व्यजानत किमिदं यक्षमिति ॥**

*एषां तत विजज्ञौ तेभ्यः प्रादुर्बभूव तत इयं यक्षं किं? इति ते न व्यजानत ।*

**ದೇವತೆಗಳ ಅಜ್ಞಾನವನ್ನು (ಗರ್ವವನ್ನು) ಆ ಬ್ರಹ್ಮವು ತಿಳಿದುಕೊಂಡಿತು. ಅವರ ಅನುಗ್ರಹಕ್ಕಾಗಿ (ಗರ್ವವನ್ನು ಅಡಗಿಸಲು) ಆ ದೇವತೆಗಳ ಎದುರಿಗೆ (ಯಕ್ಷರೂಪದಲ್ಲಿ) ಪ್ರತ್ಯಕ್ಷಗೊಂಡಿತು. ಈ ಯಕ್ಷನು ಯಾರು? ಎಂಬುದಾಗಿ ದೇವತೆಗಳಿಗೆ ತಿಳಿಯಲಿಲ್ಲ.**

*ದೇವತೆಗಳಿಗೆ ಉಂಟಾದ ಗರ್ವವನ್ನು ಹೋಗಲಾಡಿಸಲು ಅವರ ಮೇಲೆ ಕರುಣೆಯಿಂದ ಬ್ರಹ್ಮವು ಒಂದು ಯಕ್ಷನ ರೂಪದಲ್ಲಿ ಪ್ರತ್ಯಕ್ಷವಾಯಿತು. ದೇವತೆಗಳಿಗೆ ಆ ಯಕ್ಷರೂಪ ಯಾವುದೆಂದು ತಿಳಿದಿರಲಿಲ್ಲ. ಪರಮಾತ್ಮನ ಶಕ್ತಿಯನ್ನು ತಿಳಿಸಿ ಎಲ್ಲವೂ ಅವನಿಗೆ ಅಧೀನವಾದುದು ಎಂಬ ಸಂದೇಶವನ್ನು ತಿಳಿಸಲು ಈ ಕಥೆಯು ಇಲ್ಲಿ ಪ್ರಸ್ತಾಪವಾಗಿದೆ.*

## ಮಂತ್ರ - 3

**तेऽग्निमब्रुवन् जातवेद एतद्विजानीहि ।
किमेतत् यक्षमिति तथेति ॥**

*ते अग्निम् अब्रुवन् हे जातवेद एतत यक्षं किं ? इति विजानीहि तथेति ।*

**ಆ ದೇವತೆಗಳು ಅಗ್ನಿ ದೇವನನ್ನು ಕುರಿತು ಹೇಳುತ್ತಾರೆ. "ಎಲೈ ಅಗ್ನಿಯೇ ! ಈ ಯಕ್ಷನು ಯಾವುದೆಂದು ತಿಳಿದುಬಾ". ಅಗ್ನಿಯು "ಹಾಗೆಯೇ ಆಗಲಿ" ಎಂದನು.**

*ಯಕ್ಷರೂಪವಾದ ಪರಮಾತ್ಮನನ್ನು ಅರಿಯದ ದೇವತೆಗಳು ಅವರಲ್ಲಿ ತೇಜಸ್ವಿಯೂ ಹಾಗೂ ಸಾಮರ್ಥ್ಯಶಾಲಿ ಎಂದು ಪರಿಗಣಿಸಿ ಅಗ್ನಿದೇವನನ್ನು ಕುರಿತು "ಆಯಕ್ಷರೂಪವು ಯಾವುದೆಂದು ತಿಳಿದು ಬಾ" ಎಂದರು. ಅವರ ಕೋರಿಕೆಗೆ ಒಪ್ಪಿ ಅಗ್ನಿಯು ಆ ಯಕ್ಷರೂಪವನ್ನು ತಿಳಿಯಲು ಹೊರಟನು.*

**ಮಂತ್ರ - 4**

**तदभ्यद्रवत् तमभ्यवदत् कोऽसीति ।**
**अग्निर्वा अहमस्मीत्यब्रवीत् जातवेदा वा अहमस्मीति ॥**

*तत् अभ्यद्रवत् तम् कोऽसी इति अभ्यवदत् अहम् अग्निर्वा अस्मि अहम् जातवेदा अस्मि इति अब्रवीत् ।*

ಆ ಯಕ್ಷನ ಬಳಿಗೆ ವೇಗವಾಗಿ (ಅಗ್ನಿಯು) ಹೋದನು. ಆ ಅಗ್ನಿಯನ್ನು ಕುರಿತು, "ನೀನು ಯಾರಾಗಿದ್ದಿಯೇ ?" ಎಂದು ಯಕ್ಷನು ಕೇಳಿದನು. (ಅದಕ್ಕೆ ಅಗ್ನಿಯು) "ನಾನು ಅಗ್ನಿಯಾಗಿದ್ದೇನೆ. ಜಾತವೇದನಾಗಿದ್ದೇನೆ" ಎಂದು ಹೇಳಿದನು.

*ದೇವತೆಗಳ ಕೋರಿಕೆಯನ್ನು ಈಡೇರಿಸಲು ಅಗ್ನಿಯು ವೇಗವಾಗಿ ಯಕ್ಷನ ಮುಂದೆ ಬಂದು ನಿಂತನು. ಅಗ್ನಿಯನ್ನು ಕುರಿತು ಯಕ್ಷನು "ನೀನು ಯಾರು" ಎಂದು ಕೇಳಲು ಅಗ್ನಿಯು - "ವಿಶ್ವದಲ್ಲಿರುವ ಎಲ್ಲಾ ವಸ್ತುಗಳನ್ನು ದಹಿಸುವ ಶಕ್ತಿಯುಳ್ಳ ನಾನು ಅಗ್ನಿಯಾಗಿದ್ದೇನೆ." ಎಂದನು.*

**ಮಂತ್ರ - 5**

**तस्मिंस्त्वयि किं वीर्यमिति । अपीदं**
**सर्वं दहेयं यदिदं पृथिव्यामिति ॥**

*तस्मिन् त्वयि किं वीर्यम् इति यत् पृथिव्याम् इदं सर्वं अपि दहेयं इति ।*

(ಇಷ್ಟು ಪ್ರಸಿದ್ಧವಾದ) "ನಿನ್ನಲ್ಲಿ ಏನು ಶಕ್ತಿಯಿದೆ?" ಎಂದು ಯಕ್ಷನು (ಅಗ್ನಿಯನ್ನು) ಕೇಳಿದನು. ಅದಕ್ಕೆ (ಅಗ್ನಿಯು) "ಯಾವ ವಸ್ತು ಭೂಮಿಯಲ್ಲಿ ಇದೆಯೋ ಅವೆಲ್ಲವನ್ನು ಸುಡುವೆನು" ಎಂದು ಹೇಳಿದನು.

*ಅಗ್ನಿಯು ತನ್ನ ಪರಿಚಯವನ್ನು ನೀಡಿದ ನಂತರ ಯಕ್ಷನು ಮತ್ತೊಮ್ಮೆ ಅಗ್ನಿಯನ್ನು "ಅಗ್ನಿ, ಜಾತವೇದ ಎಂದೆಲ್ಲಾ ಪ್ರಸಿದ್ಧವಾದ ನಿನ್ನಲ್ಲಿ ಏನು ವಿಶೇಷ ಶಕ್ತಿಯಿದೆ ?" ಎಂದು ಪ್ರಶ್ನಿಸಿದನು. ಅದಕ್ಕೆ ಅಗ್ನಿಯು (ಅಹಂಕಾರದಿಂದ) "ವಿಶ್ವದಲ್ಲಿ ಇರುವ ಎಲ್ಲಾ ವಸ್ತುಗಳನ್ನು ನಾನು ಸುಡಬಲ್ಲೆ" ಎಂದನು.*

ಮಂತ್ರ - 6

**तस्मै तृणं निदधौ एतद्दहेति | तदुपप्रेयाय सर्वजवेन |
तन्न शशाक दग्धुम् |
स तत एव निववृते नैतदशकं विज्ञातुं यदेतद्यक्षमिति ||**

*तस्मै तृणं निदधौ एतत् दहा इति | तत् सर्वजवेन पप्रेयाय तत् दग्धुम न शशाक| सः तत एव निववृते यत् एतत् यक्षं इति विज्ञातुं न अशकं|*

ಆಗ ಯಕ್ಷನು (ಅಗ್ನಿಗೆ) ಒಂದು ಹುಲ್ಲು ಕಡ್ಡಿಯನ್ನು ಇಟ್ಟು ಇದನ್ನು ಸುಡು ಎಂದಿತು. ಆ ಹುಲ್ಲನ್ನು ಸುಡಲು (ಅಗ್ನಿಯು) ತನ್ನ ಎಲ್ಲಾ ಬಲದೊಡನೆ ಎರಗಿತು. ಆ ಹುಲ್ಲನ್ನು ಸುಡಲು ಶಕ್ತನಾಗಲಿಲ್ಲ. (ಆ ಹುಲ್ಲನ್ನು ಸುಡಲಿಲ್ಲ ಎಂದು) ಅಗ್ನಿಯು (ನಾಚಿಕೆಯಿಂದ) ಹಿಂತಿರುಗಿದನು. ಆ ಯಕ್ಷನು ಯಾವುದೆಂದು ತಿಳಿಯಲು (ಅಗ್ನಿಯು) ಶಕ್ತನಾಗಲಿಲ್ಲ.

*ಅಗ್ನಿಯ ಉತ್ತರಕ್ಕೆ ಯಕ್ಷನು ಒಂದು ಹುಲ್ಲುಕಡ್ಡಿಯನ್ನು ಇಟ್ಟು "ನಿನ್ನ ಅತಿಶಯವಾದ ಸುಡುವ ಶಕ್ತಿಯಿಂದ ಈ ಹುಲ್ಲನ್ನು ದಹಿಸು" ಎಂದನು. ತಕ್ಷಣವೇ ಅಗ್ನಿಯು ತನ್ನ ಎಲ್ಲಾ ಬಲದೊಡನೆ ಅತಿ ವೇಗವಾಗಿ ಆ ಹುಲ್ಲನ್ನು*

*ದಹಿಸಲು ಆದರ ಮೇಲೆ ಎರಗಿದನು. ಅವನಿಂದ ಹುಲ್ಲನ್ನು ಸುಡಲಾಗಲಿಲ್ಲ. ಈ ಅಪಾರವಾದ ಸೋಲಿನಿಂದ ಅವಮಾನಿತಗೊಂಡು ಅಗ್ನಿಯು "ಈ ಯಕ್ಷನು ಯಾವುದೆಂದು ತನ್ನಿಂದ ತಿಳಿಯಲು ಸಾಧ್ಯವಿಲ್ಲ" ಎಂದು ಅರಿತು ನಾಚಿಕೆಯಿಂದ ತಲೆ ತಗ್ಗಿಸಿ ಆ ಕ್ಷಣದಲ್ಲೇ ಹಿಂತಿರುಗಿದನು.*

## ಮಂತ್ರ - 7

**अथ वायुमब्रुवन् वायो एतद्विजानीहि |**
**किमेतत् यक्षमिति तथेति ||**

*अथ वायु अब्रुवन् वायो किं एतत् यक्षम् इति विजानीहि तथेति |*

**ಅನಂತರ (ದೇವತೆಗಳು) ವಾಯುವಿಗೆ ಹೇಳಿದರು "ಎಲೈ ವಾಯುವೇ ! ಈ ಯಕ್ಷನು ಯಾರೆಂದು ತಿಳಿದುಕೊಂಡು ಬಾ". ವಾಯುವು ಹಾಗೆಯೇ ಆಗಲೆಂದು ಹೇಳಿದನು.**

*ಅಗ್ನಿಯು ಹಿಂತಿರುಗಿದನಂತರ ದೇವತೆಗಳು ಆ ಯಕ್ಷ ರೂಪವನ್ನು ತಿಳಿಯಲೇ ಬೇಕೆಂದು ವಾಯುವಿನ ಬಳಿ ಬಂದು "ಹೇ ವಾಯು ದೇವನೇ ಆ ಯಕ್ಷರೂಪದವನು ಯಾರು ? ತಿಳಿದು ಬಾ" ಎಂದರು. (ತನ್ನಲ್ಲಿ ಆ ಸಾಮರ್ಥ್ಯವು ಇದೆ ಎಂದು ತಿಳಿದು) ವಾಯುವು ಅವರ ಕೋರಿಕೆಗೆ ಸಮ್ಮತಿಸಿದನು.*

## ಮಂತ್ರ - 8

**तदभ्यद्रवत् तमभ्यवदत् कोऽसीति | वायुर्वा**
**अहमस्मीत्यब्रवीत् मातरिश्वा वा अहमस्मीति ||**

*तत् अभ्यद्रवत् तम् कोऽसी इति अभ्यवदत् अहं वायु अस्मि वा मातरिश्वा इति अब्रवीत् |*

ಆ ವಾಯುವು (ಯಕ್ಷನ ಬಳಿಗೆ) ಧಾವಿಸಿದನು. (ಆ ವಾಯುವನ್ನು ಕುರಿತು ಯಕ್ಷನು, "ನೀನು ಯಾರು?" ಎಂದು ಕೇಳಿತು. (ಅದಕ್ಕೆ ವಾಯುವು) "ನಾನು ವಾಯುವಾಗಿದ್ದೇನೆ ಅಥವಾ 'ಮಾತರಿಶ್ವ' ಎಂಬ ಹೆಸರನ್ನು ಉಳ್ಳವನಾಗಿದ್ದೇನೆ" ಎಂದು ಹೇಳಿದನು.

*ವಾಯುವು ಆ ಯಕ್ಷನ ಬಳಿಗೆ ಬಂದ ಒಡನೆಯೇ, ಅಗ್ನಿಯನ್ನು ಪ್ರಶ್ನಿಸಿದಂತೆ ಯಕ್ಷನು ವಾಯುವನ್ನು "ನೀನು ಯಾರು" ಎಂದು ಕೇಳಿತು. ವಾಯುವು ಬಹಳ ಜಂಭದಿಂದ "ನಾನು ವಾಯುವು ಅಥವಾ ಮಾತರಿಶ್ವ (ಆಕಾಶದಲ್ಲಿ ಗಮನವುಳ್ಳವನು) ಎಂದು ಪ್ರಖ್ಯಾತನಾಗಿದ್ದೇನೆ" ಎಂದಿತು.*

## ಮಂತ್ರ - 9

**तस्मिंस्त्वयि किं वीर्यमिति | अपीदं**
**सर्वमाददीय यदिदं पृथिव्यामिति ||**

*तस्मिन् त्वयि किं वीर्यं इति इदं पृथिव्यां यदिदं सर्वं अपि अददीय इति |*

(ಮಾತರಿಶ್ವ ಎಂಬ ಹೆಸರುಳ್ಳ ವಾಯುವನ್ನು ಯಕ್ಷನು) ಅಂತಹ ನಿನ್ನಲ್ಲಿ ಏನು ಶಕ್ತಿಯಿದೆ ? (ಎಂದು ಕೇಳಲು ವಾಯುವು) ಈ ಭೂಮಿಯಲ್ಲಿ ಇರುವ ಎಲ್ಲಾ ವಸ್ತುವನ್ನು ಎತ್ತಿಕೊಂಡು ಹೋಗುತ್ತೇನೆ. (ಎಂದು ಹೇಳಿದನು.)

*ಅಂತಹ ವಿಶ್ವ ಪ್ರಸಿದ್ಧವಾದ ನಿನ್ನಲ್ಲಿ ಏನು ವಿಶೇಷ ಶಕ್ತಿಯಿದೆ? ಎಂದು ಯಕ್ಷನು ವಾಯುವನ್ನು ಕೇಳಿದನು. ಅದಕ್ಕೆ ವಾಯುವು (ಅಹಂಕಾರದಿಂದ) "ನಾನು ಈ ಪೃಥಿವಿಯಲ್ಲಿರುವ ಎಲ್ಲಾ ವಸ್ತುಗಳನ್ನು ಒಯ್ಯಬಲ್ಲೆನು" ಎಂದು ಉತ್ತರಿಸಿದನು.*

## ಮಂತ್ರ - 10

**तस्मै तृणं निदधौ एतदादत्स्वेति |**
**तदुपप्रेयाय सर्वजवेन | तन्न शशाकादातुं |**
**स तत एव निववृते नैतदशकं**
**विज्ञातुं यदेतत् यक्षमिति ||**

*तस्मै तृणं निदधौ एतत् अदस्व इति सः सर्वजवेन पप्रेयाय तत आदातुं न शशक सः तत एव निववृते एतत् यक्षं विज्ञातुं न अशकं इति |*

ಅವನ ಮುಂದೆ ಆ ಯಕ್ಷನು ಬಂದು ಹುಲ್ಲನ್ನು ಇಟ್ಟನು. ಇದನ್ನು ಎತ್ತಿಕೊಂಡು ಹೋಗು ಎಂದನು. ಆ ವಾಯುವು ಎಲ್ಲಾ ವೇಗದಿಂದ ಅದನ್ನು ಎತ್ತಿಕೊಳ್ಳಲು ಎರಗಿದನು. ಅದನ್ನು ಎತ್ತಿಕೊಳ್ಳಲು ಸಮರ್ಥನಾಗಲಿಲ್ಲ. ಆದುದರಿಂದಲೇ ಅವನು (ನಾಚಿಕೆಯಿಂದ) ಹಿಂತಿರುಗಿದನು. ಆ ಯಕ್ಷನು ಯಾರೆಂದು ತಿಳಿಯಲು ನಾನು ಶಕ್ತನಾಗಲಿಲ್ಲ (ಎಂದು ದೇವತೆಗಳಿಗೆ ಹೇಳಿದನು)

*ಯಕ್ಷನು ಒಡನೆಯೇ ವಾಯುವಿನ ಮುಂದೆ ಒಂದು ಹುಲ್ಲು ಕಡ್ಡಿಯನ್ನು ಇಟ್ಟು, "ಎಲೈ ವಾಯುವೇ ನೀನು ಈ ಹುಲ್ಲುಕಡ್ಡಿಯನ್ನು ಒಯ್ಯುವೆಯಾ?" ಎಂದನು. ವಾಯುವು ತನ್ನ ಎಲ್ಲಾ ಶಕ್ತಿಯೊಡನೆ ವೇಗವಾಗಿ ಅದನ್ನು ಒಯ್ಯಲು ಪ್ರಯತ್ನಿಸಿದನು. ಆದರೆ ಅದು ಸಾಧ್ಯವಾಗಲಿಲ್ಲ. ಆಗ ಅವಮಾನಗೊಂಡು ವಾಯುವು "ತಾನು ಈ ಯಕ್ಷನನ್ನು ಅರಿಯಲು ಅಸಮರ್ಥನು" ಎಂದು ತಿಳಿದು ನಾಚಿಕೆಯಿಂದ ದೇವತೆಗಳೆಡೆಗೆ ಹಿಂದಿರುಗಿದನು.*

## ಮಂತ್ರ - 11

**अथेन्द्रमबुवन् मघवन् तद्विजानीहि किमेतत् यक्षमिति |**
**तथेति तदभ्यद्रवत् तस्मात्तिरोदधे ||**

*अथ इन्द्रम् अब्रुवम् (हे मघवन्) किं एतत् यक्षं इति विजानीहि तथेति तत् अभ्यद्रवत् तस्मात् तिरोदधे।*

ಅನಂತರ (ದೇವತೆಗಳು) ಇಂದ್ರನಿಗೆ ಹೇಳಿದರು. ಹೇ ಇಂದ್ರನೇ ! ಆ ಯಕ್ಷನು ಯಾರೆಂದು ನೀನು ತಿಳಿದುಕೊಂಡು ಬಾ. ಇಂದ್ರನು ಹಾಗೆಯೇ ಆಗಲೆಂದು ಆ ಯಕ್ಷನ ಕಡೆಗೆ ಧಾವಿಸಿದನು. ಇಂದ್ರನ ಸಮೀಪದಿಂದ ಆ ಯಕ್ಷನು ಕಣ್ಮರೆಯಾದನು.

*ಆ ಯಕ್ಷನು ಯಾರೆಂದು ತಿಳಿಯಲು ಅಗ್ನಿ, ವಾಯುದೇವತೆಗಳು ಅಸಮರ್ಥರಾದಾಗ, ದೇವತೆಗಳು ಇಂದ್ರನನ್ನು ಸಮೀಪಿಸಿ ಅವನನ್ನು ಆ ಯಕ್ಷನ ಬಗೆಗೆ ತಿಳಿದು ಬರಲು ಹೇಳಿದರು. ಇಂದ್ರನು ಅವರ ಪ್ರಾರ್ಥನೆಯನ್ನು ಮನ್ನಿಸಿ ಆಕ್ಷಣವೇ ಯಕ್ಷನ ವಿವರವನ್ನು ತಿಳಿಯಲು ಧಾವಿಸಿದನು. ಆದರೆ ಅಗ್ನಿ, ವಾಯುಗಳಿಗೆ ಅವಮಾನವಾದಂತೆ ಇಂದ್ರನಿಗೆ ಆಗಬಾರದೆಂದು ನೆನಸಿ, ಆ ಯಕ್ಷನು ಅಲ್ಲಿಂದ ಮರೆಯಾದನು.*

## ಮಂತ್ರ - 12

**स तस्मिन्नेवाकाशे स्त्रियमाजगाम बहुशोभमानां**
**उमां हैमवतीं | तां होवाच किमेतत् यक्षमिति ||**

*स तस्मिन्नेव आकाशे बहुशोभमानां हैमवतीं मां स्त्रिय अजगाम तां एतत् यक्षं किं इति होवाच ।*

ಆ ಇಂದ್ರನು ಆಕಾಶದಲ್ಲಿಯೇ (ಪ್ರತ್ಯಕ್ಷವಾದ) ಅತ್ಯಂತ ಪ್ರಕಾಶಮಾನವಾದ ಹಿಮವತ್ ಪುತ್ರಿ ಉಮಾದೇವಿಯನ್ನು ಸಮೀಪಿಸಿದನು. ಆ ಪಾರ್ವತಿ ದೇವಿಯನ್ನು ಕುರಿತು "ಈ ಯಕ್ಷನು ಯಾರೆಂದು" ಕೇಳಿದನು.

*ಯಕ್ಷಸ್ವರೂಪವು ಮಾಯವಾದದ್ದನ್ನು ಕಂಡು ಇಂದ್ರನು ವಿಸ್ಮಯಗೊಂಡನು. ಆ ಯಕ್ಷ ಸ್ವರೂಪವು ಮರೆಯಾದ ಒಡನೆಯೇ, ನಾನಾ*

ಆಭರಣಗಳಿಂದ ಹಾಗೂ ನಾನಾ ಅಲಂಕಾರಗಳಿಂದ ಶೋಭಿತಳಾದ ಪಾರ್ವತಿ ದೇವಿಯು ಪ್ರತ್ಯಕ್ಷಳಾಗುತ್ತಾಳೆ. ಇಂದ್ರನು ಪಾರ್ವತಿ ದೇವಿಯನ್ನು ಸಮೀಪಿಸಿ "ಆ ಯಕ್ಷನು ಯಾರು" ಎಂಬುದಾಗಿ ಕೇಳುತ್ತಾನೆ.

## चतुर्थः खण्डः

### ಮಂತ್ರ - 1

**सा ब्रह्मेति होवाच ब्रह्मणो वा एतद्विजये**
**महीयध्वमिति | ततो हैव विदाञ्चकार ब्रह्मेति ||**

*सा ब्रह्मेति उवाच ब्रह्मणो एतत् विजये महीयध्वं इति ततो हैव ब्रह्मेति विदाञ्चकार |*

ಲಕ್ಷ್ಮೀ ದೇವಿಯು ಇಂದ್ರನಿಗೆ "ಅವನು ಬ್ರಹ್ಮನು" ಎಂದು ಹೇಳಿದಳು. ಬ್ರಹ್ಮಸಂಪಾದಿಸಿದ ಈ ವಿಜಯದಲ್ಲಿ ನೀವು ಮಹಿಮೆಯನ್ನು ಹೊಂದಿದ್ದಿರಿ ಎಂದು. (ದೇವಿಯು ಹೇಳಿದುದರಿಂದಲೇ) ಆ ಯಕ್ಷನು ಪರಬ್ರಹ್ಮ ಶ್ರಿಯಃ ಪತಿಯೆಂದು (ಇಂದ್ರನು) ತಿಳಿದನು.

*ದೇವಿಯು (ಇಂದ್ರನಿಗೆ) ಆ ಯಕ್ಷರೂಪದಲ್ಲಿ ಪ್ರತ್ಯಕ್ಷವಾದುದು ಆ ಬ್ರಹ್ಮವೇ ಆ ಬ್ರಹ್ಮಕ್ಕೆ ಸಂಭವಿಸಿದ ವಿಜಯದಿಂದಲೇ ನೀವು ಪ್ರಶಂಸೆಯನ್ನು ಪಡೆದಿದ್ದಿರಿ "ನಾವು ವಿಜಯವನ್ನು ಪಡೆದೆವು" ಎಂಬ ಅಹಂಕಾರದ ಮಾತನ್ನು ನೀವು ಬಿಡಬೇಕು. ಇಂದ್ರನು ಮಾತೆಯ ಉಪದೇಶದಿಂದ ಆ ಯಕ್ಷನು ಪರಬ್ರಹ್ಮನೆಂದು ತಿಳಿದನು.*

### ಮಂತ್ರ - 2

**तस्माद्वा एते देवा अतितरां इवान्यान्देवान् यदग्निर्वायुरिन्द्राः ।**
**ते ह्येनत् नेदिष्टं पस्पृशुः । ते ह्येनत्प्रथमो विदाञ्चकार ब्रह्मेति ।।**

*अग्निर्वायुरिन्द्राः एते एनत् नेदिष्ठं पस्पृशुः ते हि एनत् ब्रह्मेति विदाञ्चकार तस्मात् वा ते एते देवा अन्यान् देवान् अतितरां इवाः ।*

ಅಗ್ನಿ, ವಾಯು, ಇಂದ್ರಾದಿ ದೇವತೆಗಳು ಆ ಬ್ರಹ್ಮವನ್ನು ಅತ್ಯಂತ ಸಮೀಪದಲ್ಲಿ ಸ್ಪರ್ಶಿಸಿದರು (ಮತ್ತು) ಆ ಯಕ್ಷನನ್ನು ಬ್ರಹ್ಮವೆಂದು ಮೊದಲು ತಿಳಿದರೋ, ಆ ಕಾರಣದಿಂದಲೇ ಅವರು ಇತರ ದೇವತೆಗಳನ್ನು ಹೆಚ್ಚಾಗಿ ಮೀರಿಸಿದರು.

*ಅಗ್ನಿ ವಾಯು ಇಂದ್ರರು ಆ ಯಕ್ಷರೂಪಿಯಾದ ಪರಬ್ರಹ್ಮನನ್ನು ಅತೀವ ಸಮೀಪದಲ್ಲಿ ಸಾಕ್ಷಾತ್ಕರಿಸಿಕೊಂಡರು ಹಾಗೂ ಅದು ಬ್ರಹ್ಮವೆಂದು ಮೊದಲು ತಿಳಿದಿದ್ದರಿಂದ ಇತರ ಬೇರೆ ದೇವತೆಗಳಿಗಿಂತ ಮೇಲಾಗಿದ್ದಾರೆ.*

## ಮಂತ್ರ - 3

**तस्माद्वा इन्द्रोऽतितरां इवान्यान् देवान् स ह्येनन्नेदिष्ठं ।**
**पस्पर्श स ह्येनत्प्रथमो विदाञ्चकार ब्रह्मेति ॥**

*इन्द्रः एनत् नेदिष्ठं पस्पर्श सः ऐतेन ब्रह्मेति विदाञ्चकार तस्मात् वा सः अन्यान् अतितरां इव ।*

ಇಂದ್ರನು ಈ ಯಕ್ಷನನ್ನು ಅತ್ಯಂತ ಸಮೀಪದಲ್ಲಿ ನೋಡಿದನು. ಅವನು ಈ ಯಕ್ಷವನ್ನು ಮೊದಲನೆಯವನಾಗಿ ಬ್ರಹ್ಮನೆಂದು ತಿಳಿದನು. ಆದುದರಿಂದಲೇ ಇಂದ್ರನು ಇತರ ದೇವತೆಗಳಿಗಿಂತ ಅತಿಶಯನಾದನು.

*ಅಗ್ನಿ, ವಾಯು ಹಾಗೂ ಇಂದ್ರರಲ್ಲಿ, ಇಂದ್ರನು ಮೊದಲು ಆ ಯಕ್ಷನನ್ನು ಪರಬ್ರಹ್ಮನೆಂದು ಪಾರ್ವತಿದೇವಿಯ ಉಪದೇಶದಿಂದ ತಿಳಿದಿದ್ದರಿಂದ ಅವನು ಅಗ್ನಿ, ವಾಯು ದೇವತೆಗಳಿಗಿಂತಲೂ ಅತಿಶಯನಾದನು.*

## ಮಂತ್ರ - 4

**तस्यैष आदेशः यदेतत् विद्युतो व्यद्युतदा इति ।**
**इन्यमीमिषदा इत्यधिदैवतम् ।।**

*तस्य एष आदेशः यत् एतत् विद्युता व्यद्युतदा इति न्यमीमिषदा इत्यधि दैवतम् ।*

ಆ ಬ್ರಹ್ಮವನ್ನು ತಿಳಿಯುವ ಬಗೆಗೆ (ನಿದರ್ಶದೊಡನೆ) ಹೇಳುವ ಉಪದೇಶವಿದು. ಈ ಬ್ರಹ್ಮವು ಮಿಂಚಿನ ಹೊಳಪಿನಿಂದ ಕಣ್ಣುರೆಪ್ಪೆ ಹೇಗೆ ಮುಚ್ಚಿಕೊಳ್ಳುವುದೋ (ಹಾಗೇ) ಅಸ್ಥಿರವಾದುದು. ಇದು ದೇವತೆಗಳ ಸಂದರ್ಭದಲ್ಲಿ ಹೇಳುವ ನಿರೂಪಣೆ.

*ಬ್ರಹ್ಮದ ಆವಿರ್ಭಾವವನ್ನು ಎರಡು ಉಪಯೋಗಗಳಿಂದ ಹೇಳಿದೆ. ಹೇಗೆ ಮಿಂಚು ಕ್ಷಣಕಾಲ ಕಾಣುವುದೋ, ಹಾಗೂ ಕಣ್ಣುರೆಪ್ಪೆ ಕ್ಷಣಕಾಲ ತೆರೆದು ಮುಚ್ಚಿಕೊಳ್ಳುವುದೋ ಹಾಗೆಯೇ ಯಕ್ಷರೂಪಿಯಾದ ಪರಬ್ರಹ್ಮನು ಕ್ಷಣಕಾಲ ಕಾಣಿಸಿಕೊಂಡು ಮರೆಯಾದನು.*

## ಮಂತ್ರ - 5

**अथाध्यात्मं यदेतत् गच्छतीव च मनोऽनेन ।**
**चैतदुपस्मरति अभीक्ष्णं सङ्कल्पः ॥**

*अथ अध्यात्मं यत् एतत् मनो गच्छतीव संङ्कल्पः अभीक्ष्णं एतत् उपस्मरति ।*

ಅನಂತರದಲ್ಲಿ ಶರೀರದ ಸಂಭಂದದಲ್ಲಿ ಉದಾಹರಣೆಯನ್ನು ಹೇಳಿ ನಿರೂಪಣೆ ಮಾಡಿದೆ. ಈ ಬ್ರಹ್ಮವು ಮನಸ್ಸು ಸಂಚಾರಮಾಡುವಂತೆ (ಹಾಗೇ ಚಂಚಲ). ಹೇಗೆ ಮನಸ್ಸಿನ ಧ್ಯಾನ ವಿಶೇಷವು ಬ್ರಹ್ಮ ಚಿಂತನೆಯಲ್ಲಿ ಕ್ಷಣಕಾಲ ಮಾತ್ರ ಧ್ಯಾನ ಮಾಡಬಲ್ಲದೋ ಹಾಗೆಯೇ ಪರಬ್ರಹ್ಮ ಆವಿರ್ಭಾವವೂ ಕ್ಷಣಿಕ.

*ಬ್ರಹ್ಮದ ಆವಿರ್ಭಾವವೂ ಕ್ಷಣಿಕ ಎಂಬುದನ್ನು ಇಲ್ಲಿ ಮನಸ್ಸಿನ ವ್ಯಾಪಾರಕ್ಕೆ ಹೋಲಿಸಿ ಹೇಳಿದೆ. ಮನಸ್ಸು ಚಂಚಲ. ಮನಸ್ಸು ಬ್ರಹ್ಮ ಚಿಂತನೆಯಲ್ಲಿ ಕ್ಷಣಕಾಲ ಮಾತ್ರ ಹೇಗೆ ನೆಲೆಸುವುದೋ, ಹಾಗೆಯೇ ಯಕ್ಷಬ್ರಹ್ಮನ ಆವಿರ್ಭಾವವೂ ಬಹುಕಾಲ ಮುಂದುವರಿಯಲಾರದು. ಈ ದೃಷ್ಟಾಂತದ ಮೂಲಕ ಬ್ರಹ್ಮಧ್ಯಾನದ ಆವೃತ್ತಿಯು ಕಷ್ಟಕರ ಎಂದು ತೋರಿಸಿದಂತಾಯಿತು.*

**ಮಂತ್ರ - 6**

**तद्ध तद्वनं नाम तद्वनमित्युपासितव्यं | स य एतदेवं**
**वेद अभिहैनं सर्वाणि भूतानि संवाञ्छन्ति ||**

*तत् तत् वनं नाम वनं इति उपासितव्यं एतत् सः देवं अभिवेद एनं सर्वाणि भूतानि संवाञ्छन्ति |*

**ಇಂತಹ ಮಹಿಮೆಯುಳ್ಳ, ಆ ಬ್ರಹ್ಮನೂ ಎಲ್ಲರಿಂದಲೂ ನಮಸ್ಕರಿಸಲ್ಪಟ್ಟಿರುವುದರಿಂದ "ವನಂ" ಎಂದು ಉಪಾಸನೆ ಮಾಡಬೇಕು. ಆ ಪರಬ್ರಹ್ಮನನ್ನು ಯಾರು ಈ ವಿಧವಾಗಿ ತಿಳಿಯುತ್ತಾರೆಯೋ (ಅಂದರೆ ಉಪಾಸನೆ ಮಾಡುತ್ತಾರೋ) ಅವರನ್ನು ಎಲ್ಲಾ ಪ್ರಾಣಿಗಳು ಗೌರವಿಸುತ್ತದೆ.**

*ಈ ರೀತಿಯಾಗಿ ಮಹಿಮೆಯನ್ನುಳ್ಳ, ಎಲ್ಲರಿಂದಲೂ ಪ್ರಾರ್ಥಿಸಲ್ಪಡುವ ಬ್ರಹ್ಮಕ್ಕೆ "ವನಂ" ಎಂದು ಹೆಸರು. ಎಲ್ಲೆಡೆಯೂ ವ್ಯಾಪಿಸಿರುವ ಹಾಗೂ ಉಪಾಸನೆ ಮಾಡಲು ಯೋಗ್ಯವಾದ ಈ ಬ್ರಹ್ಮವನ್ನು "ವನಂ" ಎಂದು ಯಾರು ಉಪಾಸನೆ ಮಾಡುತ್ತಾರೋ ಅವರು ಎಲ್ಲರ ಗೌರವಕ್ಕೆ ಪಾತ್ರರಾಗುತ್ತಾರೆ.*

**ಮಂತ್ರ - 7**

**अनिषदं भो ब्रूहीति| उक्ता त अनिषद|**
**ब्राह्मीं वाव त उपनिषदं अब्रूमेति ||**

*भो उपनिषदं ब्रूही इति ते उपनिषद उक्ता ते ब्राह्मीं उपनिषदं अब्रूम इति ।*

(ಶಿಷ್ಯನು ಹೇಳುತ್ತಾನೆ) ''ಆಚಾರ್ಯರೇ ಉಪನಿಷತ್ತಿನ ರಹಸ್ಯ ವಿದ್ಯೆಯನ್ನು ಉಪದೇಶಿಸಿ'' (ಅದಕ್ಕೆ ಆಚಾರ್ಯರು) ''ನಿನಗೆ ಬ್ರಹ್ಮ ಪ್ರತಿಪದಕವಾದ ಉಪನಿಷತ್ತು ಹೇಳಲ್ಪಟ್ಟಿತು. ನಿನಗೆ (ಬ್ರಹ್ಮಸಂಬಂಧವನ್ನು ಪ್ರತಿಪಾದಿಸುವ) ಉಪನಿಷತ್ತಿನ ರಹಸ್ಯವನ್ನು ಹೇಳಿದ್ದೇನೆ'' ಎಂದರು.

*ಆಚಾರ್ಯರು ಶಿಷ್ಯನಿಗೆ ''ಬ್ರಹ್ಮತತ್ತ್ವವನ್ನು ಪ್ರತಿಪಾದಿಸುವ ಉಪನಿಷತ್ತನ್ನು ಹೇಳಿದ್ದೇನೆ. ನಿನಗೆ ತಿಳಿಯುವ ಇಚ್ಛೆ ಇರುವುದಾದರೆ ಬ್ರಹ್ಮಪ್ರಾಪ್ತಿಯ ಸಾಧನಭೂತವಾದ ತತ್ತ್ವವನ್ನು ಉಪದೇಶಿಸುತ್ತೇನೆ'' ಎನ್ನುವರು.*

## ಮಂತ್ರ - 8

**तस्यै तपो दमः कर्मेति प्रतिष्ठा । वेदाः**
**सर्वाङ्गानि सत्यमायतनम् ॥**

*तस्यै तपाः दमः कर्म इति प्रतिष्ठा वेदाः सर्वाङ्गानि सत्यम् आयतनम् ।*

ಆ ಬ್ರಹ್ಮವಿದ್ಯೆಗೆ ತಪಸ್ಸು, ಇಂದ್ರಿಯನಿಗ್ರಹ, ವರ್ಣಾಶ್ರಮ ಕರ್ಮಗಳಿಂದ (ಇವೆಲ್ಲಾ ಉಪಾಸನೆಗೆ ಅಂಗಗಳು) ಉಪಾಸನೆ ಸ್ಥಿರವಾಗುತ್ತದೆ. ವೇದಗಳೂ ಹಾಗೂ ವೇದದ ಎಲ್ಲಾ ಅಂಗಗಳು (ಶಿಕ್ಷಾ ಮೊದಲಾದವು) ಮತ್ತು ಸತ್ಯವು (ನಿಜವನರಿಯುವಿಕೆ) ಆ ಬ್ರಹ್ಮವಿದ್ಯೆಗೆ ಆಧಾರಗಳು.

*ಆಚಾರ್ಯರು ಶಿಷ್ಯರಿಗೆ ಬ್ರಹ್ಮೋಪಾಸನೆ ಮಾಡಲು ಹಾಗೂ ಅದನ್ನು ದೃಢೀಕರಿಸಿಕೊಳ್ಳಲು ತಪಸ್ಸು, ಇಂದ್ರಿಯ ನಿಗ್ರಹ ಹಾಗೂ ವಿಹಿತವಾದ ಕರ್ಮಗಳನ್ನು ಆಚರಿಸಬೇಕು ಹಾಗೂ ಬ್ರಹ್ಮಸಿದ್ಧಿಯನ್ನು ಪಡೆಯಲು ವೇದ-*

*ವೇದಾಂಗಗಳ ಅಧ್ಯಯನ ಮತ್ತು ಸತ್ಯಪಾಲನೆ ಬಹಳ ಅವಶ್ಯಕ ಎಂದು ಉಪದೇಶಿಸುತ್ತಾರೆ.*

## ಮಂತ್ರ - 9

**यो वा एतामेवं वेद अपहत्य पाप्मानं अनन्ते स्वर्गे**
**लोके ज्येये प्रतितिष्ठति प्रतितिष्ठति ||**

*एताम् यो वेद पाप्मानं अपहत्य अनन्ते ज्येये स्वर्गलोके प्रतितिष्ठति प्रतितिष्ठति |*

ಈ ಬ್ರಹ್ಮವನ್ನು ಈ ರೀತಿಯಲ್ಲಿ ಯಾರು ಉಪಾಸನೆ ಮಾಡುತ್ತಾರೋ, ಅವರು ಪಾಪವನ್ನೆಲ್ಲಾ ಹೋಗಲಾಡಿಸಿಕೊಂಡು ಕಾಲತೀತವಾದ ಮೇಲೆ ವೈಕುಂಠಲೋಕದಲ್ಲಿ ದೃಢವಾಗಿ ನಿಲ್ಲುತ್ತಾರೆ.

*ಯಾವ ಉಪಾಸಕನು ಈ ಉಪನಿಷತ್ತಿನಲ್ಲಿ ಪ್ರತಿಪಾದಿಸಿರುವ ಬ್ರಹ್ಮವಿದ್ಯೆಯನ್ನು ತಿಳಿದು ಆಚರಿಸುವನೋ ಅವನು ಪುಣ್ಯಪಾಪಗಳಿಂದ ವಿಮುಕ್ತನಾಗಿ ಶ್ರೇಷ್ಠವಾದ ಹಾಗೂ ಎಲ್ಲಕ್ಕೂ ಮೇಲಾದ ದುಃಖರಹಿತವಾದ ಮತ್ತು ಪುನರ್ಜನ್ಮವಿಲ್ಲದ ಮೋಕ್ಷವನ್ನು ಪಡೆಯುತ್ತಾನೆ.*

**शुभं भूयात्**

